


# ಭಾರತದಲ್ಲಿ ತೆರಿಗೆ ಮತ್ತು ಕಪ್ಪು ಹಣದ ಪಾತ್ರ

ಎಸ್. ಎನ್. ನಾಯಕ



ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

ಅಕ್ಟೋಬರ, ೧೯೮೮

ಉಪನ್ಯಾಸ ಗ್ರಂಥಮಾಲೆ

೩೮೭

# ಭಾರತದಲ್ಲಿ ತೆರಿಗೆ ಮತ್ತು ಕಪ್ಪು ಹಣದ ಪಾತ್ರ

ಎಸ್. ಎನ್. ನಾಯಕ




ಪ್ರಸಾರಾಂಗ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ
ಅಕ್ಟೋಬರ, ೧೯೮೬

ಪ್ರಕಾಶಕರು :

**ಎಸ್. ಬಿ. ನಾಯಕ**
ನಿರ್ದೇಶಕರು, ಪ್ರಸಾರಾಂಗ,
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಪ್ರಥಮ ಮುದ್ರಣ : ಅಕ್ಟೋಬರ, ೧೯೮೮
ಪ್ರತಿಗಳು : ೩೦೦೦



ಬೆಲೆ : ರೂ. ೧–೦೦

ಮುದ್ರಕರು :

**ಜಿ. ಬಿ. ಮನ್ವಾಚಾರ**
ಕಾರ್ಯನಿರ್ವಾಹಕ ನಿರ್ದೇಶಕರು,
ಕರ್ನಾಟಕ ವಿಶ್ವವಿದ್ಯಾಲಯ ಮುದ್ರಣಾಲಯ, ಧಾರವಾಡ

# ಮುನ್ನುಡಿ

ಕರ್ನಾಟಕ ವಿಶ್ವವಿದ್ಯಾಲಯವು ತನ್ನ ಪ್ರಸಾರಾಂಗದ ಮುಖಾಂತರ ಕೈಕೊಂಡು ನಡೆಸುತ್ತಿರುವ ಜ್ಞಾನಪ್ರಸಾರದ ಯೋಜನೆಗಳಲ್ಲಿ ಈ 'ಉಪನ್ಯಾಸ ಗ್ರಂಥಮಾಲೆ' ಅತ್ಯಂತ ಮುಖ್ಯವೂ, ಜನಪ್ರಿಯವೂ ಆಗಿರುವದು ಹೆಮ್ಮೆಯ ಮಾತಾಗಿದೆ. ವಿಶ್ವವಿದ್ಯಾಲಯದ ಆಡಳಿತ ಕ್ಷೇತ್ರದಲ್ಲಿರುವ ನಾಲ್ಕು ಜಿಲ್ಲೆಗಳಲ್ಲಿಯೂ ಉಪನ್ಯಾಸ ಶಿಬಿರಗಳನ್ನು ಏರ್ಪಡಿಸಲಾಗುತ್ತಿದ್ದು ವಿಶ್ವವಿದ್ಯಾಲಯದ ಮತ್ತು ಇದಕ್ಕೆ ಸೇರಿದ ಕಾಲೇಜುಗಳ ಪ್ರಾಧ್ಯಾಪಕರು ಸಾಹಿತ್ಯ, ವಿಜ್ಞಾನ, ಸಾಮಾಜಿಕಶಾಸ್ತ್ರ ಮೊದಲಾದ ಶಾಖೆಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಆಯ್ದುಕೊಂಡು ಶಾಸ್ತ್ರಸಮ್ಮತವಾದ ಸರಣಿಯಲ್ಲಿ ಜನಸಾಮಾನ್ಯರಿಗೆ ತಿಳಿಯುವ ಶೈಲಿಯಲ್ಲಿ ಈ ಶಿಬಿರಗಳಲ್ಲಿ ಉಪನ್ಯಾಸಗಳನ್ನು ಕೊಡುತ್ತಾರೆ. ವಿಶ್ವವಿದ್ಯಾಲಯದ ಜ್ಞಾನ ಭಂಡಾರದ ಅಲ್ಪಾಂಶವನ್ನಾದರೂ ಮಹಾಜನರ ಮನೆ ಬಾಗಿಲಿಗೆ ಒಯ್ದು ಮುಟ್ಟಿಸಬೇಕೆಂದು ಮಾಡಿದ ಈ ಪ್ರಯತ್ನಕ್ಕೆ ನಮ್ಮ ನಿರೀಕ್ಷೆಗೆ ಮೀರಿದ ಮೆಚ್ಚಿಕೆಯೂ, ಪ್ರೋತ್ಸಾಹವೂ ದೊರೆಯುತ್ತಿವೆ. ಜನರು ತಾವಾಗಿಯೇ ಮುಂದೆ ಬಂದು ತಮ್ಮ ತಮ್ಮ ಊರುಗಳಲ್ಲಿ ಈ ಉಪನ್ಯಾಸಗಳನ್ನು ಏರ್ಪಡಿಸಲು ವಿಶ್ವವಿದ್ಯಾಲಯಕ್ಕೆ ಬರೆದು ಬಿನ್ನವಿಸಿಕೊಳ್ಳುತ್ತಿರುವುದು ನಿಜವಾಗಿಯೂ ಸಂತೋಷದ ಸಂಗತಿಯಾಗಿದೆ.

ಈ ಜ್ಞಾನಪ್ರಸಾರ ಕಾರ್ಯದಲ್ಲಿ ಭಾಗವಹಿಸುವದರಿಂದ ವಿಶ್ವವಿದ್ಯಾಲಯದ ಹಾಗೂ ಕಾಲೇಜುಗಳ ಅಧ್ಯಾಪಕರಿಗೆ ಆಯಾ ಪ್ರದೇಶದ ಜನತೆಯೊಡನೆ ಹೆಚ್ಚಿನ ಸಂಪರ್ಕ ಒದಗುವದಲ್ಲದೆ ಎಂತಹ ವಿಷಯವನ್ನಾದರೂ ಕನ್ನಡದಲ್ಲಿ ತಿಳಿಸಿ ಹೇಳುವ ಹಾಗೂ ಅದನ್ನು ಸುಲಭ ಶೈಲಿಯಲ್ಲಿ ಬರವಣಿಗೆಯಲ್ಲಿಳಿಸುವ ಅವಕಾಶ ದೊರೆಯುತ್ತದೆ. ಈ ಕಾರ್ಯದಲ್ಲಿ ಅವರೆಲ್ಲರೂ ಮನವಿಟ್ಟ ಸಹಕರಿಸುತ್ತಿರುವುದು ಶ್ಲಾಘನೀಯ.

ಈ ಮಾಲೆಯಲ್ಲಿ ಈಗಾಗಲೇ ೩೮೬ ಪುಸ್ತಿಕೆಗಳು ಪ್ರಕಟ ವಾಗಿವೆ. ಅವು ಅಚ್ಚಾಗಿ ಹೊರ ಬಂದೊಡನೆ ಅವುಗಳ ಸಾವಿರಾರು ಪ್ರತಿಗಳನ್ನು ಜನರು ಕೊಂಡು ಓದುತ್ತಾರೆ. ಅನೇಕ ಪುಸ್ತಿಕೆಗಳು ನಾಲ್ಕು ಐದು ಮುದ್ರಣಗಳನ್ನು ಕಂಡಿರುವುದು ಈ ಮಾಲೆಯ ಉಪಯುಕ್ತತೆಯನ್ನೂ ಜನಪ್ರಿಯತೆಯನ್ನೂ ವ್ಯಕ್ತಗೊಳಿಸುತ್ತದೆ. ಇದು ನಾಡಿನ ಪ್ರಗತಿಯ ಚಿಹ್ನೆಯೆಂದು ಭಾವಿಸುತ್ತೇನೆ.

ವಿಶ್ವವಿದ್ಯಾಲಯದ ಈ ಸೇವೆಯ ಸಂಪೂರ್ಣ ಪ್ರಯೋ ಜನ ಪಡೆದು ಸಾಮಾನ್ಯ ಜನತೆ ನಾಡಿನ ಸರ್ವತೋಮುಖ ಪ್ರಗತಿಯಲ್ಲಿ ಪಾಲುಗೊಳ್ಳಲೆಂದು ಹಾರೈಸುತ್ತೇನೆ.

ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ

**ಜಿ. ಕೆ. ನಾರಾಯಣ ರೆಡ್ಡಿ**
ಕುಲಪತಿಗಳು

# ನೆನಹು

ಉತ್ತರ ಕನ್ನಡದ ಕಡತೋಕಾ ಗ್ರಾಮದಲ್ಲಿ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ಇಲಾಖೆಯವರು ಸಂಘಟಿಸಿದ ಉಪನ್ಯಾಸ ಮಾಲಿಕೆಯಲ್ಲಿ 'ಭಾರತದಲ್ಲಿ ತೆರಿಗೆ ಮತ್ತು ಕಪ್ಪು ಹಣದ ಪಾತ್ರ' ಎಂಬ ವಿಷಯದ ಮೇಲೆ ಮಾತನಾಡುವ ಮಹದ ವಕಾಶ ನನ್ನದಾಗಿತ್ತು. ತೆರಿಗೆ ಮತ್ತು ಕಪ್ಪು ಹಣ ಈ ಶಬ್ದಗಳು ಸಾಮಾನ್ಯನಿಗೂ ಪರಿಚಿತವಾಗಿದ್ದರೂ ಆ ಕುರಿತು ಇರುವ ಕಾಯಿದೆ ಕಲಮುಗಳು ಮಾತ್ರ ಭಾರತದಲ್ಲಿರುವ ಕಾಯಿದೆಗಳಲ್ಲಿಯೇ ಅತ್ಯಂತ ಕ್ಲಿಷ್ಟವಾದವುಗಳೆಂದು ನನ್ನ ಅನಿಸಿಕೆ. ಆದರೂ ಕಾಯಿದೆಗೆ ಅಪಚಾರವಾಗದಂತೆ ಸಾಮಾನ್ಯ ಜನರಿಗೆ ತಿಳಿಯುವ ಭಾಷೆಯಲ್ಲಿ ತೆರಿಗೆ ಮತ್ತು ಕಪ್ಪು ಹಣದ ಬಗ್ಗೆ ವಿವರಿಸಲು ಪ್ರಯತ್ನಿಸಿದ್ದೇನೆ. ಅನಂತರ ನನ್ನ ಉಪನ್ಯಾಸದ ಸಾರಾಂಶವನ್ನು ಪುಸ್ತಕ ರೂಪದಲ್ಲಿ ಪ್ರಕಟಿಸುವ ಸಲುವಾಗಿ ನನ್ನನ್ನು ಕೇಳಿಕೊಂಡದ್ದು ನನಗೊಂದು ಹೆಮ್ಮೆಯ ವಿಷಯವಾಗಿದೆ. ನನಗೆ ಉಪನ್ಯಾಸದಲ್ಲಿ ಭಾಗವಹಿಸಲು ಅವಕಾಶ ಮಾಡಿಕೊಟ್ಟದ್ದಲ್ಲದೇ, ಅದನ್ನು ಪುಸ್ತಕ ರೂಪದಲ್ಲಿ ಹೊರತರಲು ನಿರ್ಧರಿಸಿದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಸಾರಾಂಗ ವಿಭಾಗಕ್ಕೆ ನಾನು ಚಿರಋಣಿ. ಇನ್ನು ನನ್ನ ಕೈಬರಹದ ಪ್ರತಿಯನ್ನು ಓದಿ ಅರ್ಥೈಸಿಕೊಂಡು ಅಂದವಾದ ಹಸ್ತಪ್ರತಿಯನ್ನು ತಯಾರಿಸಿಕೊಟ್ಟ ನನ್ನ ಶ್ರೀಮತಿ ಪ್ರೊ. ನಿರ್ಮಲಾ ನಾಯಕ ರವರನ್ನು ಈ ಸಮಯದಲ್ಲಿ ಸ್ಮರಿಸದಿದ್ದರೆ ಅಪಚಾರವಾದೀತು.

ದಿವೇಕರ ವಾಣಿಜ್ಯ ಮಹಾವಿದ್ಯಾಲಯ **ಎಸ್. ಎನ್. ನಾಯಕ**
ಕಾರವಾರ

# ಪರಿವಿಡಿ

# ೧. ತೆರಿಗೆ ಮತ್ತು ಇತಿಹಾಸ

ತೆರಿಗೆಗೆ ಮಾನವನ ಇತಿಹಾಸವಷ್ಟೇ ಪುರಾತನ ಚರಿತ್ರೆ ಇದೆ. ಮಾನವನ ಸ್ಥಾಯೀಜೀವನ ಪ್ರಾರಂಭವಾದಂತೆ ನಾಗರಿಕತೆಯಲ್ಲಿಯೂ ಕ್ರಾಂತಿಯಾಯಿತು. ನಾಗರಿಕತೆಯ ಬೆಳವಣಿಗೆಯೊಡನೆಯೇ ತೆರಿಗೆ ಪದ್ಧತಿಯಲ್ಲಿ ಕೂಡ ಮಹತ್ತರವಾದ ಬದಲಾವಣೆಗಳಾಗಿವೆ. ಪುರಾತನ ಕಾಲದಿಂದ ಆರಂಭಿಸಿ ಆಧುನಿಕ ಯುಗದ ವರೆಗೆ ಬೇರೆ ಬೇರೆ ದೇಶಗಳ ಆಡಳಿತದ ಇತಿಹಾಸವನ್ನು ಅವಲೋಕಿಸಿದರೆ ಬೇರೆ ಬೇರೆ ಕಾಲದಲ್ಲಿ ನಡೆಸುತ್ತಿದ್ದ ಆಡಳಿತ ವ್ಯವಸ್ಥೆಯ ಪರಿಚಯವಾಗುತ್ತದೆ. ಜನತೆಯ ಹಿತ ರಕ್ಷಣೆಗಾಗಿ ರಚಿಸಲ್ಪಟ್ಟ ಯಾವುದೇ ಆಡಳಿತ ವ್ಯವಸ್ಥೆಗೆ ಮುಖ್ಯವಾಗಿ ಬೇಕಾಗುವದು ಹಣಕಾಸು. ಹಣಕಾಸಿನ ನೆರವಿಲ್ಲದೇ ಯಾವ ಆಡಳಿತ ವ್ಯವಸ್ಥೆಯೂ ನಡೆಯಲಾರದು. ಆ ಕಾರಣ ಬೇರೆ ಬೇರೆ ರೀತಿಯ ತೆರಿಗೆಗಳು ಆಡಳಿತ ವ್ಯವಸ್ಥೆಯೊಡನೆ ಹಾಸುಹೊಕ್ಕಾಗಿ ಬೆಳೆದುಕೊಂಡು ಬಂದಿವೆ.

ತೆರಿಗೆಯ ಪ್ರಭಾವ ಹಾಗೂ ಅದು ನಿರ್ಮಿಸಿದ ಅವಾಂತರಗಳು ಪುರಾಣ ಕಥೆಗಳಲ್ಲಿ ಹಾಗೂ ನಮ್ಮ ಕಾವ್ಯಗಳಲ್ಲಿ ಧಾರಾಳವಾಗಿ ಕಾಣಸಿಗುತ್ತವೆ. ರಾಘವಾಂಕನು ಬರೆದ ಹರಿಶ್ಚಂದ್ರ ಕಾವ್ಯದಲ್ಲಂತೂ ತೆರಿಗೆ ನಿರ್ಮಿಸಿದ ಅವಾಂತರ ಆ ಕಾವ್ಯವನ್ನು ಕರುಣಾರಸದ ತುತ್ತತುದಿಗೇರಿಸುವಲ್ಲಿ ಸಮರ್ಥವಾಗಿದೆ. ಮಗನ ಹೆಣವನ್ನು ಸುಡಲು ಸ್ಮಶಾನ ತೆರಿಗೆಯನ್ನು ಕೊಡಲು ಸಾಧ್ಯವಾಗದೇ ಶವ ಸುಡಲು ಬಂದ ಚಂದ್ರಮತಿ ಕಾವಲು

ಗಾರನ ಕೈಗೆ ಸಿಕ್ಕ ಪಡುವ ಪಾಡನ್ನು ಕವಿ ಕಟುಕರ ಹೃದಯ ಕೂಡ ಕರಗಿ ನೀರಾಗುವಂತೆ ಚಿತ್ರಿಸಿದ್ದಾನೆ. ಈ ಕಾವ್ಯದ ಶ್ರೇಷ್ಠತೆಗೆ ಕಳಶವಿಟ್ಟದ್ದು ತೆರಿಗೆ ಎಂದರೆ ಅತಿಶಯೋಕ್ತಿಯಾಗ ಲಾರದು. ಅಲ್ಲದೇ ಇದು ಆ ಕಾಲದ ತೆರಿಗೆ ಪದ್ಧತಿಯ ಮೇಲೆ ಹಿಡಿದ ಕನ್ನಡಿಯೂ ಆಗಿರುವದು. ಸ್ಮಶಾನಕ್ಕೂ ತೆರಿಗೆ ವಿಧಿಸಿದ ಪ್ರಭುಗಳು ಇನ್ನಾವುದನ್ನು ಬಿಟ್ಟಾರು ಎಂಬ ವಿಷಯ ನಮ್ಮ ನಿಮ್ಮ ಯೋಚನೆಗೆ ಬಿಟ್ಟದ್ದು.

ಶರೀರಕ್ಕೆ ರಕ್ತದ ಅವಶ್ಯಕತೆಯಂತೆ ಸುವ್ಯವಸ್ಥಿತ ಹಾಗು ಸುಖೀ ರಾಜ್ಯಾಡಳಿತಕ್ಕೆ ತೆರಿಗೆ ಅವಶ್ಯಕ. ಹಿತಮಿತವಾಗಿ ಆಕರಿ ಸಿದ ತೆರಿಗೆ ಔಷಧಿಯಂತೆ ಪಥ್ಯವಾಗುವದಲ್ಲದೇ ದೇಶದ ಆರ್ಥಿಕ ವ್ಯಾಧಿಯನ್ನು ನಿವಾರಿಸಲು ಕಾರಣವಾಗುತ್ತದೆ. ಅವಶ್ಯಕತೆ ಮೀರಿದ ತೆರಿಗೆ ಅತಿಯಾದ ಆಹಾರದಂತೆ ಅಜೀರ್ಣವಾಗಬಲ್ಲದು. ಮಿತಿ ಮೀರಿದ ತೆರಿಗೆ ವಿಷವಾಗಿ ಪರಿಣಮಿಸಿ ರಾಷ್ಟ್ರದ ಆರ್ಥಿಕ ವ್ಯವಸ್ಥೆಯನ್ನು ಹಾಳು ಮಾಡುವದರ ಜೊತೆಗೆ ಅಧಿಕಾರ ಪಲ್ಲಟಕ್ಕೂ ಕಾರಣವಾಗಬಹುದು.

ಚರಿತ್ರೆಯ ಪುಟಗಳನ್ನು ತಿರುವುತ್ತ ಹೋದಂತೆ ತೆರಿಗೆ ನಿರ್ಮಿಸಿದ ಅದ್ಭುತ, ಅವಾಂತರ, ಹಾಗೂ ಅದು ಜನತೆಗೆ ಕೊಟ್ಟ ಕಿರುಕುಳಗಳ ಅನುಭವವಾಗುವದರ ಜೊತೆಗೆ ತೆರಿಗೆಯ ಅಗಾಧ ತೆಯ ಅರಿವೂ ಆಗುತ್ತದೆ. ಪ್ರಾಚೀನ ಕಾಲದ ರೋಮನ್ನರು, ಇಜಿಪ್ಶಿಯನ್ನರು, ಗುಪ್ತರು, ಮೌರ್ಯರು, ಕನೋಜದ ದೊರೆಗಳು ಹೀಗೆ ಅನೇಕ ರಾಜಮಹಾರಾಜರುಗಳು ಹಿತಮಿತವಾದ ತೆರಿಗೆ ಪದ್ಧತಿಯನ್ನು ಅಳವಡಿಸಿ ಸಾಮಾಜಿಕ ಕೆಲಸಗಳನ್ನು ಕೈಕೊಂಡು ಜನಾನುರಾಗಿಗಳಾಗಿ ಇತಿಹಾಸದಲ್ಲಿ ತಮ್ಮ ನೆನಪನ್ನು ಚಿರಕಾಲ

ಬಿಟ್ಟು ಹೋಗಿದ್ದಾರೆ. ಇದೇ ರೀತಿ ತೆರಿಗೆ ನಿರ್ಮಿಸಿದ ಅವಾಂತರ, ತೆರಿಗೆ ಜನತೆಗೆ ಕೊಟ್ಟ ಕಿರುಕುಳಗಳ ಉದಾಹರಣೆಗಳು ಕೂಡ ಹೇರಳವಾಗಿ ಸಿಗುತ್ತವೆ.

ನಿರಂಕುಶ ಪ್ರಭುತ್ವ, ಅತಿಯಾದ ತೆರಿಗೆ ಮಧ್ಯಯುಗದ ಫ್ರಾನ್ಸಿನ ಜನತೆ ನರಳಿ ಸುಣ್ಣವಾಗುವಂತೆ ಮಾಡಿತು. ಲೂಯಿಗಳ ವಿಲಾಸ ಜೀವನ, ಸರದಾರ ಸಾಮಂತರ ನಿರಂಕುಶ ಪ್ರಭುತ್ವ, ಎಲ್ಲಕ್ಕಿಂತ ಮಿಗಿಲಾಗಿ ಫ್ರಾನ್ಸಿನ ಸಾಮಾನ್ಯ ಜನತೆಯ ಮೇಲೆ ಹೇರಿದ ಅಪರಿಮಿತ ತೆರಿಗೆಯ ಕಾರಣ ಜನಜನತೆಯ ಜೀವನ ದುರ್ಭರವಾಯಿತು. ಕೊನೆಗೊಮ್ಮೆ ಜನತೆಯ ಆಕ್ರೋಶ ಭುಗಿಲೆದ್ದು ರಾಜ ಸರದಾರರ ರಕ್ತತರ್ಪಣದೊಂದಿಗೆ ಪ್ರಜಾಪ್ರಭುತ್ವದ ಜಾರಿಗೆ ನಾಂದಿಯಾಯಿತು. ಇದು ಪುನಃ ಮರುಕಳಿಸಿದ್ದು ರಶಿಯದಲ್ಲಿ ಝಾರ ದೊರೆಗಳ ಸರ್ವಾಧಿಕಾರ, ಅಧಿಕ ಕರಭಾರದ ಕಾರಣ ಶತಶತಮಾನಗಳವರೆಗೆ ಶೋಷಿಸಲ್ಪಟ್ಟ ರಶಿಯಾದ ಜನತೆ ಎಚ್ಚೆತ್ತು ರಕ್ತರಂಜಿತ ಕ್ರಾಂತಿಯಾಯಿತು. ಝಾರರ ಅರಮನೆ ರಕ್ತದ ಮಡುವಿನಲ್ಲಿ ಮುಳುಗಿ ಕತ್ತಲು ಕಳೆದು ಬೆಳಕು ಬಂದಂತೆ ಹೊಸ ರಾಜ್ಯ ಪದ್ಧತಿ ಆರಂಭವಾಯಿತು. ಇದಕ್ಕೆಲ್ಲ ಕಾರಣ ಅತಿಯಾದ ತೆರಿಗೆ ಎಂಬುದನ್ನು ನಾವಿಲ್ಲಿ ನೆನಪಿಡಬೇಕು.

ತೆರಿಗೆ ದೇಶದ ಅರ್ಥವ್ಯವಸ್ಥೆಯ ಬೆನ್ನೆಲುಬು. ಅದು ಪ್ರಭುತ್ವದ ಸಂಕೇತವೂ ಕೂಡ. ಅಮೇರಿಕೆಯ ಸ್ವಾತಂತ್ರ್ಯ ಯುದ್ಧಕ್ಕೆ ಕಾರಣ ಒಂದು ಕ್ಷುಲ್ಲಕ ತೆರಿಗೆ ಎಂಬುದು ನಮಗೆಷ್ಟು ಮಂದಿಗೆ ತಿಳಿದಿದೆ? ಬ್ರಿಟಿಶರ ವಸಾಹತುವಾದ ಅಮೇರಿಕನ್ನರು ಕ್ರಮೇಣ ಸ್ವತಂತ್ರರಂತೆ ವರ್ತಿಸತೊಡಗಿದರು. ಆದರೆ ಬ್ರಿಟಿ

ಶರು ತಮ್ಮ ಪ್ರಭುತ್ವವನ್ನು ಸ್ಥಿರಪಡಿಸಲು ಅಮೇರಿಕಕ್ಕೆ ಕಳು ಹಿಸುವ ಚಹದ ಮೇಲೆ ಅತ್ಯಲ್ಪ ಪ್ರಮಾಣದ ತೆರಿಗೆ ಹೇರಿದರು. ಈ ತೆರಿಗೆಯ ಉದ್ದೇಶ ಹಣ ಸಂಗ್ರಹಿಸುವದಾಗಿರದೇ ಪ್ರಭುತ್ವ ವನ್ನು ಹೇರುವದಾಗಿತ್ತು, ಆದರೆ ಈ ತತ್ವವನ್ನೇ ವಿರೋಧಿಸು ತ್ತಿದ್ದ ಅಮೇರಿಕದ ಜನತೆ ಬೋಸ್ಟನ್ ಬಂದರಿಗೆ ಬಂದಿಳಿದ ಹಡಗಿನಿಂದ ಎಲ್ಲ ಚಹವನ್ನು ಸಮುದ್ರಕ್ಕೆ ಸುರುಹಿ ಬ್ರಿಟಿಶರ ಪ್ರಭುತ್ವವನ್ನು ನಿರಾಕರಿಸಿದರು. ಇದೇ ಘಟನೆ ಮುಂದೆ ಸ್ವಾತಂತ್ರ್ಯ ಯುದ್ಧಕ್ಕೆ ನಾಂದಿಯಾಗಿ ಅಮೇರಿಕ ಸ್ವತಂತ್ರ ವಾಯಿತು.

ಈ ಘಟನೆ ಭಾರತದಲ್ಲಿ ಪುನರಾವೃತ್ತಿಯಾಯಿತು. ಬ್ರಿಟಿಶರು ಉಪ್ಪಿನ ಮೇಲೆ ಹೇರಿದ ತೆರಿಗೆ ಹಾಗೂ ವಿದೇಶಿ ವಸ್ತುಗಳ ಮೇಲೆ ಹೇರಿದ ಕರ, ಗಾಂಧೀಜಿಗೆ ಬ್ರಿಟಿಶರ ವಿರುದ್ಧ ಹೋರಾಡುವ ಅಸ್ತ್ರಗಳಾದವು. ಗಾಂಧೀಜೀ ನೇತೃತ್ವದಲ್ಲಿ ಇಡೀ ದೇಶ ಸಿಡಿದೆದ್ದಿತು. ಸ್ವದೇಶಿ ಚಳುವಳಿ ದೇಶದ ಮೂಲೆ ಮೂಲೆಗೂ ಹಬ್ಬಿ ಕೊನೆಗೆ ಉಪ್ಪಿನ ಸತ್ಯಾಗ್ರಹವಾಗಿ ಪರಿಣಮಿಸಿ ಉಗ್ರರೂಪ ತಾಳಿ ಚಲೇಜಾವ ಚಳುವಳಿಗೆ ಪ್ರೇರಣೆ ನೀಡಿ ಬ್ರಿಟಿಶರನ್ನು ಭಾರತದಿಂದ ಓಡಿಸುವಲ್ಲಿ ಸಮರ್ಥವಾಯಿತು. ಹೀಗೆ ಬ್ರಿಟಿಶರು ವಿದೇಶಿ ವಸ್ತುಗಳು ಮತ್ತು ಉಪ್ಪಿನ ಮೇಲೆ ಹೇರಿದ ತೆರಿಗೆಗಳೇ ದೇಶಕ್ಕೆ ಸ್ವಾತಂತ್ರ್ಯ ಬರಲು ಮೂಲ ಪ್ರೇರಣೆ ಎಂಬುದನ್ನು ನಾವು ಮರೆಯಬಾರದು.

## ೨. ತೆರಿಗೆ ಎಂದರೇನು ?

ದಿನದಿಂದ ದಿನಕ್ಕೆ ತೆರಿಗೆ ಪದ್ಧತಿಯಲ್ಲಿ ಶಾಸ್ತ್ರೀಯ ಬದಲಾವಣೆಗಳಾಗುತ್ತಿದ್ದಂತೆ, ತೆರಿಗೆ ಎಂಬ ಪದದ ಅರ್ಥ ವ್ಯಾಪ್ತಿಯೂ ವಿಸ್ತಾರಗೊಳ್ಳುತ್ತಿದೆ. ಅರ್ಥಶಾಸ್ತ್ರ ಪಂಡಿತರನೇಕರು ತೆರಿಗೆ ವ್ಯಾಖ್ಯೆಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿರುವರು. ಪ್ರಸಿದ್ಧ ಅರ್ಥಶಾಸ್ತ್ರಜ್ಞ ಸೆಲಿಗ್‌ಮನ್‌ರವರು ತೆರಿಗೆಯನ್ನು "ಸರಕಾರವು ಜನತೆಯ ಒಟ್ಟು ಹಿತಾಸಕ್ತಿಗಾಗಿ ವ್ಯಯಿಸಿದ ವೆಚ್ಚವನ್ನು ಅರ್ಥ ವ್ಯಕ್ತಿಗಳಿಂದ ಕಡ್ಡಾಯವಾಗಿ ಪಡೆಯುವ ಮೊತ್ತ" ಎಂದು ವಿವರಿಸಿದ್ದಾರೆ. ಆದರೆ ಸಾಮಾನ್ಯನಿಗೂ ತಿಳಿಯುವ ರೀತಿಯಲ್ಲಿ ತೆರಿಗೆಯನ್ನು "ತೆರಿಗೆದಾರನು ಯಾವ ರೀತಿಯ ನೇರ ಪ್ರತಿಫಲವನ್ನು ಪಡೆಯದೇ ಒಂದು ಆಡಳಿತ ವ್ಯವಸ್ಥೆಗೆ ಕಡ್ಡಾಯವಾಗಿ ಕೊಡುವ ಮೊತ್ತ"ವೆಂದು ವ್ಯಾಖ್ಯಾನಿಸಬಹುದು.

ಆಡಳಿತ ನಡೆಸುವ ಸರಕಾರಕ್ಕೆ ಅದು ಕೇಂದ್ರವಿರಲಿ, ರಾಜ್ಯವಿರಲಿ ಅಥವಾ ಸ್ಥಾನಿಕ ಆಡಳಿತವೇ ಇರಲಿ ಆಡಳಿತವನ್ನು ಸುಸೂತ್ರವಾಗಿ ನಡೆಸಲು ಹಾಗೂ ಜನ ಸಾಮಾನ್ಯರ ಅನುಕೂಲತೆಗಾಗಿ ಒದಗಿಸಬೇಕಾದ ಸೇವಾ ಸೌಲಭ್ಯಗಳಿಗಾಗಿ ಹಣದ ಅವಶ್ಯಕತೆ ಇರುವದು ಸಹಜ. ತೆರಿಗೆ ಒಬ್ಬ ವ್ಯಕ್ತಿ ಅಥವಾ ಸಂಸ್ಥೆ, ಸರಕಾರವು ಈ ಸಾಮಾಜಿಕ ಅನುಕೂಲತೆಗಳಿಗಾಗಿ ಮಾಡಿದ ವೆಚ್ಚವನ್ನು ಭರಿಸುವ ಸಲುವಾಗಿ ಕಡ್ಡಾಯವಾಗಿ ನೀಡಿದ ವಂತಿಗೆಯಾಗಿರುತ್ತವೆ. ತೆರಿಗೆಯಲ್ಲಿ ಮುಖ್ಯವಾಗಿರುವ ಅಂಶಗಳೆಂದರೆ ತೆರಿಗೆ ಕೊಡುವ ವ್ಯಕ್ತಿ ತಾನು ಕೊಡುವ ತೆರಿಗೆಗೆ ಪ್ರತಿಯಾಗಿ ಸರಕಾರದಿಂದ ನೇರವಾಗಿ ಯಾವ ಪ್ರತಿಫಲವನ್ನು

ಅಪೇಕ್ಷಿಸಲಾರ. ಆದರೆ ಆತ ಕೊಡುವ ತೆರಿಗೆಯಿಂದ ಸಮಾಜದ ಇತರ ವ್ಯಕ್ತಿಗಳಿಗೆ ಅನುಕೂಲವಾಗುವಂತೆ ತೆರಿಗೆದಾರನಿಗೂ ಅನುಕೂಲವಾಗುವದು. ಸರಕಾರವು ತೆರಿಗೆಯಿಂದ ಸಂಗ್ರಹಿಸಿದ ಹಣವನ್ನು ಶಾಲೆ, ಆಸ್ಪತ್ರೆಗಳನ್ನು ನಡೆಸುವ ಸಲುವಾಗಿಯೋ ಅಥವಾ ರೇಲ್ವೆ, ರಸ್ತೆ ಮುಂತಾದ ಸಾರಿಗೆ ಸೌಲಭ್ಯವನ್ನು ಒದಗಿಸುವ ಸಲುವಾಗಿಯೋ ಉಪಯೋಗಿಸಬಹುದು. ಹೀಗೆ ಒದಗಿಸಿದ ಸೌಲಭ್ಯಗಳನ್ನು ಇತರ ನಾಗರಿಕರಂತೆ ತೆರಿಗೆದಾರನೂ ಕೂಡ ಅನುಭವಿಸುತ್ತಾನೆ. ತಾನು ತೆರಿಗೆದಾರನೆಂಬ ಕಾರಣದಿಂದ ಇತರ ನಾಗರಿಕರಿಗಿಲ್ಲದ ಹೆಚ್ಚಿನ ಸೌಲಭ್ಯಗಳನ್ನು ಆತ ಪಡೆಯಲಾರನು.

ಸರಕಾರಕ್ಕೆ ಹಣಕಾಸಿನ ಅವಶ್ಯಕತೆ ಹೆಚ್ಚಿದಂತೆ ತೆರಿಗೆ ಪದ್ಧತಿಯಲ್ಲಿ ಕೂಡ ನಿರಂತರ ಬದಲಾವಣೆಗಳಾಗುತ್ತಿವೆ. ತೆರಿಗೆಯನ್ನು ಮುಖ್ಯವಾಗಿ ಪ್ರತ್ಯಕ್ಷ ತೆರಿಗೆ ಮತ್ತು ಅಪ್ರತ್ಯಕ್ಷ ತೆರಿಗೆಗಳೆಂದು ವಿಂಗಡಿಸಬಹುದು. ಒಂದು ತೆರಿಗೆ ಪ್ರತ್ಯಕ್ಷವೋ ಅಥವಾ ಅಪ್ರತ್ಯಕ್ಷವೋ ಎಂದು ವ್ಯಾಖ್ಯಾನಿಸುವದು ಶಾಸ್ತ್ರೀಯವಾಗಿ ಕಠಿಣವಾದರೂ, ತೆರಿಗೆಯ ಹೊರೆ ಮತ್ತು ಅದು ಬೀರುವ ಪರಿಣಾಮಗಳ ಮೇಲೆ ವಿಂಗಡಿಸಬಹುದು. ಪ್ರತ್ಯಕ್ಷ ತೆರಿಗೆಯಲ್ಲಿ ತೆರಿಗೆದಾರನೇ ತೆರಿಗೆ ಭಾರವನ್ನು ಹೊರಬೇಕಾಗುತ್ತದೆ. ತಾನು ಕೊಟ್ಟ ತೆರಿಗೆಯನ್ನು ಅವನು ಬೇರೆಯವರಿಗೆ ವರ್ಗಾಯಿಸಲಾರ. ಆದಾಯಕರ, ಕಂಪನಿಕರ, ಸಂಪತ್ತಿನಕರ ಮುಂತಾದವುಗಳು ಇವಕ್ಕೆ ಉದಾಹರಣೆಗಳು. ಅಪ್ರತ್ಯಕ್ಷ ತೆರಿಗೆಯೆಂದರೆ ತೆರಿಗೆಯನ್ನು ಯಾವುದೇ ವ್ಯಕ್ತಿ ಮೂಲದಲ್ಲಿ ಕೊಟ್ಟರೂ ಅದನ್ನು ಅವನು ಬೇರೊಬ್ಬರಿಗೆ ವರ್ಗಾಯಿಸಲು ಸಾಧ್ಯ. ಉತ್ಪಾದನೆ ಮೇಲಿನ ಕರ, ಮಾರಾಟಕರ ಮುಂತಾದವುಗಳು ಈ ಮಾಲಿಕೆ

ಯಲ್ಲಿ ಬರುತ್ತವೆ. ಸರಕಾರವು ಉತ್ಪಾದಕರಿಂದ ನಾನಾ ಹಂತದಲ್ಲಿ
ರ ವಸೂಲು ಮಾಡುವದಾದರೂ ಉತ್ಪಾದಕನು ಅದನ್ನು
ಮಾರಾಟ ಮಾಡುವಾಗ ವಸ್ತುವಿನ ಬೆಲೆಯಲ್ಲಿ ಸೇರಿಸಿ ಗ್ರಾಹಕ
ಗೆ ವರ್ಗಾಯಿಸುತ್ತಾನೆ. ಪ್ರತ್ಯಕ್ಷ ತೆರಿಗೆಯು ಆದಾಯ ತೆರಿಗೆ
ದಾರನಿಗೆ ನೇರವಾಗಿ ಆಗುವದಾದರೆ ಅಪ್ರತ್ಯಕ್ಷ ತೆರಿಗೆ ಕೆಲವು
ವೇಳೆ ತೆರಿಗೆದಾರನ ಗಮನಕ್ಕೆ ಬರದಿರಬಹುದು. ನಾವು ದಿನ
ತ್ಯ ಖರೀದಿಸುವ ಎಲ್ಲ ವಸ್ತುಗಳ ಮೇಲೆಯೂ ತೆರಿಗೆ ಕೊಡು
ತ್ತೇವೆ. ಆದರೆ ಎಷ್ಟು ಜನರಿಗೆ ಅದರ ಅರಿವಿದೆಯೆಂಬುದು
ಯೋಚಿಸಬೇಕಾದ ವಿಷಯ. ಪ್ರತ್ಯಕ್ಷ ತೆರಿಗೆ, ಅರಿವಿಗೆ ಕೊಡದೇ
ನ್ನು ಚುಚ್ಚಿ ನಡೆಸಿದಂತೆ. ಅದರಿಂದಾಗುವ ನೋವು ಅಧಿಕ.
ಎರಡೂ ಪ್ರಕಾರದ ತೆರಿಗೆಗಳ ಉದ್ದೇಶ ಒಂದೇ ಆದರೂ
ತೆರಿಗೆದಾರನ ಮೇಲೆ ಆಗುವ ಪರಿಣಾಮ ಮಾತ್ರ ಬೇರೆ.

ಯಾವ ಪ್ರತಿಫಲವನ್ನು ಪಡೆಯದೇ ತಾನು ಗಳಿಸಿದ ಹಣ
ವನ್ನು ತೆರಿಗೆ ರೂಪದಲ್ಲಿ ಕೊಡುವದೆಂದರೆ ಯಾರಿಗೂ ಸಂತೋಷ
ವಾಗುವ ವಿಷಯವಲ್ಲ. ಮನುಷ್ಯನಿಗೆ ಜೀವನದಲ್ಲಿ ಅಪ್ರಿಯವಾದ
ಎರಡು ವಿಷಯಗಳೆಂದರೆ ತೆರಿಗೆ ಮತ್ತು ಸಾವು. ಆದರೆ ದುರ್ದೈವ
ದಿಂದ ಅವನು ಅನುಭವಿಸಲೇ ಬೇಕಾದ ಅನಿವಾರ್ಯಗಳಲ್ಲಿ ಸಾವು
ಮತ್ತು ತೆರಿಗೆ ಎರಡೂ ಸೇರಿವೆ. ಉಮರ ಖಯ್ಯಾಮನು ತನ್ನ
ರುಬಾಯತ್‌ಗಳಲ್ಲಿ ಹೇಳಿರುವಂತೆ ಸಾವು ಅನಿವಾರ್ಯವೆಂದು
ತಿಳಿದಾಗ ಅದನ್ನು ನೆನೆನೆನೆದು ಚಿಂತಿಸುವದಕ್ಕಿಂತ ನಗುನಗುತ್ತ
ಆಹ್ವಾನಿಸುವದರಲ್ಲಿಯೇ ಸುಖವಿದೆ. ಹಾಗೆಯೇ ತೆರಿಗೆಯೂ
ಕೂಡ ಅನಿವಾರ್ಯವೆಂದು ತಿಳಿದು ಅದನ್ನು ಸಮಾಧಾನದಿಂದ
ಸ್ವೀಕರಿಸಿದರೆ ಮನಸ್ಸಿನ ಚಿಂತೆಯಾದರೂ ಕಡಿಮೆಯಾಗುತ್ತದೆ.

## ೩. ತೆರಿಗೆ ಏಕೆ ?

ಹದಿನೆಂಟನೆ ಶತಮಾನದಲ್ಲಿ ಯುರೋಪಿನಲ್ಲಾದ ಔದ್ಯೋ-
ಗಿಕ ಕ್ರಾಂತಿ ಕ್ರಮೇಣ ಜಗತ್ತಿನ ತುಂಬೆಲ್ಲ ವ್ಯಾಪಿಸಿ ದೇಶದ
ಆರ್ಥಿಕ ಹಾಗೂ ಸಾಮಾಜಿಕ ವ್ಯವಸ್ಥೆಯಲ್ಲಿ ಆಮೂಲಾಗ್ರ
ಬೆಳವಣಿಗೆಗಳಾದವು. ಹಳ್ಳಿಗಳಲ್ಲಿಯ ಗುಡಿಕೈಗಾರಿಕೆಗಳು ನಷ್ಟ
ವಾಗಿ ನಗರೀಕರಣ ಪ್ರಾರಂಭವಾಯಿತು. ನಗರೀಕರಣದಿಂದ
ಉತ್ಪಾದನೆಯಲ್ಲಿ ಕ್ರಾಂತಿಯಾದಂತೆ ಉದ್ಯೋಗ, ವಸತಿ, ತರ
ಬೇತಿ, ಸಾರಿಗೆ ಮುಂತಾದ ಸಮಸ್ಯೆಗಳು ಹುಟ್ಟಿಕೊಂಡವು.
ಹೆಚ್ಚುತ್ತಿರುವ ಜನಸಂಖ್ಯೆ, ಕಲ್ಯಾಣ ರಾಜ್ಯದ ಕಲ್ಪನೆ, ಕ್ಷಿಪ್ರಗತಿ
ಯಲ್ಲಿ ಬದಲಾಗುತ್ತಿರುವ ಆರ್ಥಿಕ ಮತ್ತು ಸಾಮಾಜಿಕ ವ್ಯವಸ್ಥೆ,
ಮುಂದುವರಿದ ಸಂರಕ್ಷಣ ತಂತ್ರ ಹಾಗೂ ಮೇಲಿಂದ ಮೇಲೆ
ಸಂಭವಿಸುತ್ತಿರುವ ಯುದ್ಧ ಅಥವಾ ಅದರ ಭೀತಿ ಈ ವಿಷಯ
ಗಳು ಆಧುನಿಕ ಸರಕಾರಗಳು ಹೆಚ್ಚು ಹೆಚ್ಚು ವೆಚ್ಚಮಾಡಲು
ಪ್ರೇರೇಪಿಸುತ್ತವೆ. ಆಡಮ್‌ಸ್ಮಿತ್‌ರಂತಹ ಶ್ರೇಷ್ಠ ಅರ್ಥಶಾಸ್ತ್ರಜ್ಞರ
ಪ್ರಕಾರ ನಾಗರಿಕರ ನಿತ್ಯ ಜೀವನದಲ್ಲಿ ಮೇಲಿಂದ ಮೇಲೆ ತಲೆ
ಹಾಕದ ಸರಕಾರ ಉತ್ತಮ ಸರಕಾರವೆಂದೆನಿಸಿತ್ತು. ಆದರೆ ಈಗ
ಕಾಲ ಬದಲಾಗಿದೆ. ದೇಶದ ಆರ್ಥಿಕ ಮತ್ತು ಸಾಮಾಜಿಕ ಬೆಳವಣಿಗೆ
ಗೊಳಿಸುವಲ್ಲಿ ಬಂಡವಾಳಶಾಹಿ ವ್ಯವಸ್ಥೆ ವಿಫಲವಾಗಿದೆ. ಕಮ್ಯು
ನಿಸ್ಟ ರಾಷ್ಟ್ರಗಳಲ್ಲಿ ಸಂಪೂರ್ಣ ಅರ್ಥವ್ಯವಸ್ಥೆ ಸಾರ್ವಜನಿಕವಾಗಿ
ದ್ದರೆ ಪ್ರಜಾಪ್ರಭುತ್ವ ಮಾದರಿಯ ರಾಷ್ಟ್ರಗಳಲ್ಲಿ ಕೂಡ ಪಕ್ಷ
ಮಾದರಿಯ ಆಡಳಿತವಿರುವದರಿಂದ ಪ್ರತಿಪಕ್ಷಗಳೂ ಆಡಳಿತ
ಸೂತ್ರವನ್ನು ಹಿಡಿಯುವದಕ್ಕಾಗಿ ಪಕ್ಷದ ಚುನಾವಣಾ ಪ್ರಣಾಳಿ

ಗಳಲ್ಲಿ ಸಾರ್ವಜನಿಕ ಹಿತೋಪಯೋಗಿಯಾದ ಅನೇಕ ಕಾರ್ಯ ಕ್ರಮಗಳನ್ನು ಹಾಕಿಕೊಂಡಿರುತ್ತವೆ. ಸಾಲಮೇಳ, ತಾಳಿಭಾಗ್ಯ, ಹೆರಿಗೆ ಭತ್ಯ, ಇಪ್ಪತ್ತು ಅಂಶದ ಕಾರ್ಯಕ್ರಮ ಇವೆಲ್ಲ ಇಂಥ ಪ್ರಣಾಳಿಕೆಗಳ ಉದಾಹರಣೆಗಳು. ಹೀಗಾಗಿ ಅವುಗಳ ಅನುಷ್ಠಾನಕ್ಕೆ ಅಪಾರವಾದ ಹಣಕಾಸಿನ ಅವಶ್ಯಕತೆ ಉಂಟಾಗುತ್ತದೆ.

ಹಿಂದಿನ ಕಾಲದಲ್ಲಿ ಆಂತರಿಕ ಆಡಳಿತ, ನ್ಯಾಯ ವ್ಯವಸ್ಥೆ ಮತ್ತು ದೇಶ ರಕ್ಷಣೆ ಈ ಮೂರು ಹೊಣೆಗಾರಿಕೆಗಳು ಮಾತ್ರ ಸರಕಾರದ ಕರ್ತವ್ಯಗಳಾಗಿದ್ದವು. ಉಳಿದಂತೆ ಎಲ್ಲ ಅನುಕೂಲತೆ ಗಳೂ ನಾಗರಿಕರ ಹೊಣೆಗಾರಿಕೆಗಳಾಗಿದ್ದವು. ಆದರೆ ಆಧುನಿಕ ಸರಕಾರಗಳು ಸಾಮಾಜಿಕ ನ್ಯಾಯದ ಹೊಣೆಗಾರಿಕೆಯನ್ನು ಹೊತ್ತುಕೊಂಡಿರುವದರಿಂದ ದೇಶದ ಸಮಗ್ರ ಜನತೆಗೆ ಸುಖ ಸಮೃದ್ಧಿಯ ಜೀವನ ನಡೆಸಲು ಅನುಕೂಲ ಮಾಡಿಕೊಡುವ ಹೊಣೆ ಹೊತ್ತಿವೆ. ಅದು ಅಲ್ಲದೇ ಬೃಹದಾಕಾರದಲ್ಲಿ ಬೆಳೆಯು ತ್ತಿರುವ ಕೈಗಾರಿಕೀಕರಣದ ಕಾರಣ ಖಾಸಗೀ ರಂಗಗಳಿಗೆ ಅದನ್ನು ಹೊರುವದು ಅಸಾಧ್ಯವಾಗಿದೆ. ಆ ಕಾರಣ ಸರಕಾರಗಳೇ ಈ ಹೊರೆಯನ್ನು ಹೊರಬೇಕಾಗಿದೆ. ಭಾರತದಂಥ ಮುಂದು ವರಿಯುತ್ತಿರುವ ರಾಷ್ಟ್ರಗಳು ಕೈಗಾರಿಕೀಕರಣದ ಅಡಿಪಾಯಗಳಾದ ಉಕ್ಕು, ಕಬ್ಬಿಣ, ಸಾರಿಗೆ, ನೀರಾವರಿ, ವಿದ್ಯುತ್ ಮುಂತಾದ ಬಾಬ್ತುಗಳ ಮೇಲೆ ಮಿಲಿಯಗಟ್ಟಲೆ ಹಣ ಖರ್ಚು ಮಾಡಬೇಕಾ ಗಿದೆ. ಈ ಎಲ್ಲ ಉದ್ದೇಶಗಳ ಪೂರೈಕೆಗೆ ಬೇಕಾಗುವ ಹಣಕಾಸನ್ನು ಸರಕಾರ ವಿವಿಧ ಮೂಲಗಳಿಂದ ಪಡೆಯುತ್ತದೆ. ಹೀಗೆ ಸರಕಾರ ಹಣ ಪಡೆಯುವ ವಿವಿಧ ಮೂಲಗಳಲ್ಲಿ ತೆರಿಗೆ ಒಂದು ಪ್ರಮುಖ ಸಾಧನವಾಗಿದೆ. ಹೀಗೆಂದು ಸಾರ್ವಜನಿಕ ಹಣಕಾಸು ಸಂಗ್ರಹಣೆ ಯಲ್ಲಿ ತೆರಿಗೆಯೊಂದೇ ಮೂಲವೆಂದು ಭಾವಿಸಿರುವದು ತಪ್ಪು.

ಉದಾಹರಣೆಗೆ ಎಣ್ಣೆ ಉತ್ಪಾದಿಸುತ್ತಿರುವ ಅನೇಕ ಅರಬ ರಾಷ್ಟ್ರಗಳಲ್ಲಿ ತೆರಿಗೆ ವಿಧಿಸಿದರೂ ಅದು ಅತ್ಯಲ್ಪ ಪ್ರಮಾಣದಲ್ಲಿ ಇರುತ್ತದೆ. ಇನ್ನು ಯುರೋಪಿನಂತಹ ಮುಂದುವರಿದ ರಾಷ್ಟ್ರಗಳಲ್ಲಿ ಸರಕಾರಗಳು ತೊಡಗಿಸಿದ ಬಂಡವಾಳದ ಮೇಲಿನ ಲಾಭಗಳು ದೊಡ್ಡ ಮೊತ್ತವಲ್ಲಿರುತ್ತವೆ. ಇದೂ ಅಲ್ಲದೆ ಇನ್ನೂ ಅನೇಕ ಮೂಲಗಳಿಂದ ಸರಕಾರಕ್ಕೆ ಹಣ ಸಂದಾಯವಾಗುತ್ತದೆ.

ತೆರಿಗೆ ಹೇರುವುದು ಹಣ ಸಂಗ್ರಹಿಸುವ ಉದ್ದೇಶಕ್ಕೆ ಮಾತ್ರ ಎಂಬ ತಿಳುವಳಿಕೆಯೂ ತಪ್ಪು. ತೆರಿಗೆಯ ಮೂಲಕ ಸರಕಾರ ಪೇಟೆಯನ್ನು ನಿಯಂತ್ರಣದಲ್ಲಿಡಲು ಸಾಧ್ಯ. ದೇಶದಲ್ಲಿ ಅತಿಪ್ರಸರಣ ಉಂಟಾದಾಗ ಅಧಿಕ ತೆರಿಗೆ ಹೇರಿ ಜನರಲ್ಲಿಯ ಖರೀದಿಸುವ ಶಕ್ತಿಯನ್ನು ಕಡಿಮೆ ಮಾಡಿ ಅತಿಪ್ರಸರಣಕ್ಕೆ ಕಡಿವಾಣ ಹಾಕಬಹುದು. ಸ್ವಾಸ್ಥ್ಯಕ್ಕೆ ಹಾನಿಕಾರಕವಾದ ವಸ್ತುಗಳ ಮೇಲೆ ಹೇರಿ ಅವುಗಳ ಉಪಯೋಗವನ್ನು ಕಡಿಮೆಗೊಳಿಸಬಹುದು. ಸರಾಯಿ, ಮದ್ಯ, ತಂಬಾಕು ಮುಂತಾದ ನಶೆಯ ಪದಾರ್ಥಗಳ ಮೇಲೆ ತೆರಿಗೆ ಹೇರುವ ಮೂಲ ಉದ್ದೇಶ ಅವುಗಳ ಬಳಕೆಯನ್ನು ಕಡಿಮೆ ಮಾಡುವುದಾಗಿದೆ.

ಹಿಂದುಳಿದ ಹಾಗೂ ಅಭಿವೃದ್ಧಿಪರ ದೇಶಗಳು ಆರ್ಥಿಕ ಸ್ವಾವಲಂಬನೆಯನ್ನು ಪಡೆಯಬೇಕಾದರೆ ದೇಶದ ಉದ್ದಿಮೆಗಳನ್ನು ಬಲಿಷ್ಠ ರಾಷ್ಟ್ರಗಳ ಸ್ಪರ್ಧೆಯಿಂದ ರಕ್ಷಿಸಬೇಕಾಗುವುದು. ಅಂತಹ ಸಮಯದಲ್ಲಿ ದೇಶದ ದೂರದ ಹಿತವನ್ನು ದೃಷ್ಟಿಯಲ್ಲಿಟ್ಟುಕೊಂಡು 'ಕೂಸನ್ನು ಪೋಷಿಸು, ಮಗುವನ್ನು ರಕ್ಷಿಸು, ಮತ್ತು ದೊಡ್ಡವರನ್ನು ಅವರಷ್ಟಕ್ಕೆ ಬಿಟ್ಟು ಬಿಡು' ಎನ್ನುವ ತತ್ವವನ್ನು ಅನುಸರಿಸಬೇಕು. ಇದರರ್ಥವೆಂದರೆ ಹೊಸದಾಗಿ ಸ್ಥಾಪಿಸಿದ ಉದ್ದಿಮೆಗಳಿಗೆ ಪರದೇಶದಲ್ಲಿ ತಯಾರಾದ ವಸ್ತುವಿ

ನೊಡನೆ ಗುಣಮಟ್ಟದಲ್ಲಾಗಲೀ, ಬೆಲೆಯಲ್ಲಾಗಲೀ ಸ್ಪರ್ಧಿಸಲು ಸಾಧ್ಯವಾಗುವದಿಲ್ಲ. ಅಂಥ ಸಮಯದಲ್ಲಿ ಸರಕಾರವು ಪರದೇಶದಿಂದ ಆಮದಾಗುವ ವಸ್ತುಗಳ ಮೇಲೆ ಭಾರವಾದ ತೆರಿಗೆಯನ್ನು ಹೇರಿಯೋ ಅಥವಾ ಅಂಥ ವಸ್ತುಗಳ ಆಯಾತವನ್ನು ಕೆಲವು ಕಾಲ ಪೂರ್ಣ ನಿಷೇಧಿಸಿಯೋ, ದೇಶೀ ಉದ್ದಿಮೆ ತನ್ನ ಕಾಲ ಮೇಲೆ ನಿಂತು ಸ್ಪರ್ಧಾರಂಗವನ್ನು ಪ್ರವೇಶಿಸುವಂತೆ ಮಾಡಬಹುದು. ವ್ಯಾಪಾರಿಗಳು ಲಾಭದಾಸೆಯಿಂದ ದೇಶದಲ್ಲಿ ದೊರಕುವ ಅವಶ್ಯಕ ವಸ್ತುವನ್ನು ಅಥವಾ ಅಮೂಲ್ಯ ವಸ್ತುಗಳನ್ನು ಬೇರೆ ದೇಶಗಳಿಗೆ ಮಾರಲು ಹವಣಿಸುವದು ಸಹಜ. ಅಂಥ ವಸ್ತುಗಳ ನಿರ್ಯಾತಕ್ಕೆ ಅವಕಾಶ ಕೊಟ್ಟರೆ ದೇಶದಲ್ಲಿ ಅವಶ್ಯಕ ವಸ್ತುಗಳ ಕೊರತೆಯುಂಟಾಗಿ ಸಾಮಾನ್ಯ ಜನತೆ ತೊಂದರೆಗೆ ಈಡಾಗಬೇಕಾಗುತ್ತದೆ. ಹಾಗಾಗದಂತೆ ನೋಡಿಕೊಳ್ಳಲು ಸರಕಾರ ಅವಶ್ಯಕ ವಸ್ತುಗಳ ನಿರ್ಯಾತದ ಮೇಲೆ ಭಾರವಾದ ತೆರಿಗೆ ಹೇರಿ ಅವರ ಬೆಲೆ ಪರದೇಶದಲ್ಲಿ ಹೆಚ್ಚಾಗುವಂತೆ ಮಾಡಿ ನಿರ್ಯಾತವನ್ನು ಕೈಬಿಡುವಂತೆ ಮಾಡಬಹುದು. ಈ ರೀತಿ ತೆರಿಗೆ ದೇಶದ ಆರ್ಥಿಕ ವ್ಯವಸ್ಥೆಯನ್ನು ಮತ್ತು ಸಾಮಾಜಿಕ ಸ್ವಾಸ್ಥ್ಯವನ್ನು ರಕ್ಷಿಸುವ ಹಾಗೂ ದೇಶದ ಔದ್ಯೋಗಿಕ ವ್ಯವಸ್ಥೆಯ ಮೇಲೆ ಆಗುವ ಆಕ್ರಮಣವನ್ನು ತಡೆಯುವ ಅಸ್ತ್ರವೂ ಆಗಿದೆ. ಆಯಾತ ನಿರ್ಯಾತ ತೆರಿಗೆಗಳು ದೇಶದ ಹಿತವನ್ನು ರಕ್ಷಿಸುವದರ ಜೊತೆಗೆ ದೇಶದ ಖಜಾನೆಯನ್ನು ತುಂಬುತ್ತವೆ. ತಾತ್ವಿಕವಾಗಿ ವಿವರಿಸುವದಾದರೆ ತೆರಿಗೆ ಉದ್ದೇಶ ಹಣ ಸಂಗ್ರಹಿಸುವದೊಂದೇ ಆಗಿರದೇ ದೇಶದ ಸಮಗ್ರ ಆರೋಗ್ಯವನ್ನು ಕಾಯ್ದುಕೊಳ್ಳುವ ಸಾಧನವಾಗಿದೆ ಎನ್ನಬಹುದು.

## ೪. ತೆರಿಗೆ ಹೇಗಿರಬೇಕು?

ನಾಗರಿಕರ ಹಿತರಕ್ಷಣೆ ಮಾಡಿಯೂ ಅವರಿಂದ ಯಾವುದೇ ಪ್ರತಿಫಲವನ್ನು ನಿರೀಕ್ಷಿಸದ ಸರಕಾರ ಉತ್ತಮ ಸರಕಾರವೆಂಬುದು ವೈಚಾರಿಕವಾಗಿ ಸರಿಯೆನಿಸಿದರೂ ವ್ಯಾಪಾಹಾರಿಕವಾಗಿ ಅಂಥ ಸರಕಾರಗಳು ಜಗತ್ತಿನಲ್ಲಿ ಎಲ್ಲಿಯೂ ಇಲ್ಲವೆನ್ನಬಹುದು. ಸಾರ್ವಜನಿಕ ಹಣಕಾಸು ವ್ಯವಸ್ಥೆಯಲ್ಲಿ ತೆರಿಗೆ ಒಂದು ಅವಶ್ಯಕ ಅಂಗವೆಂಬುದನ್ನು ಹಾಗೂ ತೆರಿಗೆ ಸಲ್ಲಿಸುವದು ನಾಗರಿಕನ ಕರ್ತವ್ಯವಷ್ಟೇ ಅಲ್ಲದೆ ಹೊಣೆಗಾರಿಕೆಯೂ ಆಗಿದೆಯೆಂಬುದು ನಾವೆಲ್ಲ ಒಪ್ಪಿಕೊಂಡ ಸತ್ಯ. ತೆರಿಗೆ ಕೊಡುವದು ನಾಗರಿಕನ ಕರ್ತವ್ಯವೆಂದ ಮಾತ್ರಕ್ಕೆ ಮನಸ್ಸಿಗೆ ಬಂದಂತೆ ಸರಕಾರ ತೆರಿಗೆ ಹಾಕಬಹುದೆಂಬ ಅರ್ಥವಲ್ಲ. ತೆರಿಗೆ ಹೇಗಿರಬೇಕೆಂಬ ಬಗ್ಗೆ ಹಾಗೂ ಉತ್ತಮ ತೆರಿಗೆಯ ಲಕ್ಷಣಗಳ ಬಗ್ಗೆ ಅರ್ಥಶಾಸ್ತ್ರ ಪಂಡಿತರಲ್ಲಿ ಕಳೆದ ಶತಮಾನದಿಂದೀಚೆ ಚರ್ಚೆಗಳು ನಡೆಯುತ್ತಲೇ ಇವೆಯಾದರೂ ಈ ರೀತಿ ಹೇರಿದ ತೆರಿಗೆಯೇ ಉತ್ತಮ ತೆರಿಗೆ ಎಂಬ ಬಗ್ಗೆ ಎಲ್ಲ ಪಂಡಿತರಲ್ಲಿಯೂ ಏಕಾಭಿಪ್ರಾಯ ಉಂಟಾಗುವದು ಸಾಧ್ಯವಾಗಿಲ್ಲ. ಸಮಾಜವಾದಿ ಸಮಾಜ ನಿರ್ಮಾಣವಾದಿಗಳ ದೃಷ್ಟಿಯಲ್ಲಿ ಉತ್ತಮ ತೆರಿಗೆ ಎನಿಸಿದ ಪದ್ಧತಿ. ಬಂಡವಾಳಶಾಹಿ ಸಮಾಜ ನಿರ್ಮಾಣವಾದಿಗಳಿಗೆ ಉತ್ತಮವೆನಿಸಲಿಕ್ಕಿಲ್ಲ. ಶ್ರೀಮಂತರಿಗೆ ಅನುಕೂಲವಾದ ತೆರಿಗೆ ಪದ್ಧತಿ ಸಾಮಾನ್ಯ ಜನರಿಗೆ ಪ್ರತಿಕೂಲವೆನಿಸಬಹುದು. ರಾಷ್ಟ್ರ ಸಮಾಜ ಮತ್ತು ಪ್ರತಿ ನಾಗರಿಕನ ಹಿತವನ್ನು ಲಕ್ಷ್ಯದಲ್ಲಿಟ್ಟುಕೊಂಡು ಉತ್ತಮ ತೆರಿಗೆ ಹೇಗಿರಬೇಕೆಂಬುದನ್ನು ನಿರ್ಧರಿಸ

ಬೇಕಾಗುವದು ಹಾಗೆಂದು ಉತ್ತಮ ತೆರಿಗೆ ಎಂದು ಹೇಳಿಸಿ ಕೊಳ್ಳುವ ತೆರಿಗೆ ಪ್ರಾಯೋಗಿಕವಾಗಿ ಕಾರ್ಯಸಾಧುವೆನಿಸದಿರಲೂ ಬಹುದು. ಮೇಲೆ ಹೇಳಿದ ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟು ಕೊಂಡು ಉತ್ತಮ ತೆರಿಗೆಯ ಲಕ್ಷಣಗಳನ್ನು ಈ ಕೆಳಗಿನಂತೆ ವಿವರಿಸಬಹುದು.

೧. ಸರಕಾರಕ್ಕೆ ಸಾರ್ವಜನಿಕ ವೆಚ್ಚಕ್ಕಾಗಿ ಅಪಾರ ಹಣದ ಅವಶ್ಯಕತೆ ಇರುವದರಿಂದ ಅದು ಜನತೆಯ ಮೇಲೆ ಹೇರಿದ ತೆರಿಗೆ ಅಧಿಕ ಆದಾಯವನ್ನು ತರುವಂತಿರಬೇಕು.

೨. ತೆರಿಗೆ ಕೊಡುವವರ ಯೋಗ್ಯತೆಯ ಮೇಲೆ ತೆರಿಗೆಯ ಹೊರೆ ಸಮಾನವಾಗಿರಬೇಕು.

೩. ತೆರಿಗೆ ಸಂಗ್ರಹದ ವೆಚ್ಚ ಕಡಿಮೆಯಾಗಿರಬೇಕು. ಕೆಲವು ಸಂದರ್ಭಗಳಲ್ಲಿ ಸರಕಾರಕ್ಕೆ ಬರುವ ಆದಾಯಕ್ಕಿಂತ ಅದರ ಸಂಗ್ರಹ ಣೆಯ ವೆಚ್ಚವೇ ಹೆಚ್ಚಾಗುತ್ತ. ದೆಅಂತಹ ತೆರಿಗೆಯಿಂದ ನಾಗರಿಕರಿಗೆ ಕಿರುಕುಳವೇ ಹೊರತು ಸರಕಾರಕ್ಕೆ ಯಾವ ಲಾಭವೂ ಆಗುವದಿಲ್ಲ.

೪. ತೆರಿಗೆ ಸಾಧ್ಯವಾದ ಮಟ್ಟಿಗೆ ಸಾರ್ವಜನಿಕವಾಗಿರ ಬೇಕು. ಆರ್ಥರ್‌ಯಂಗ್ ಎಂಬ ಪಂಡಿತರು 'ಕೇವಲ ಕೆಲವರ ಮೇಲೆ ಹೇರಿದ ದುಬಾರಿ ತೆರಿಗೆಗಿಂತ ಅನೇಕರ ಮೇಲೆ ಹೇರಿದ ಅಲ್ಪ ತೆರಿಗೆ ಉತ್ತಮವೆಂದು ಹೇಳುತ್ತಾರೆ. ಈ ಮಾತಿನಲ್ಲಿ ಎರಡು ಮುಖ್ಯ ಅಂಶಗಳು ಅಡಗಿರುತ್ತವೆ. ಮೊದಲನೆಯ ದೆಂದರೆ ಕೇವಲ ಕೆಲವರ ಮೇಲೆಯೇ ತೆರಿಗೆ ಹೇರಿದರೆ ಸರಕಾರ ತಮ್ಮ ಮೇಲೆ ಭೇದ-ಭಾವ ಮಾಡುತ್ತದೆ ಎಂಬ ಭಾವನೆ ತೆರಿಗೆದಾತನಿಗೆ ಉಂಟಾಗಬಹುದು. ಅದಕ್ಕೆ ಪ್ರತಿಯಾಗಿ

ಅನೇಕರ ಮೇಲೆ ಸ್ವಲ್ಪವೇ ತೆರಿಗೆ ಹೇರಿದರೆ ಪ್ರತಿಯೊಬ್ಬನಿಗೂ ತಾನೊಬ್ಬ ತೆರಿಗೆದಾರ, ದೇಶದ ಆರ್ಥಿಕ ಅಭಿವೃದ್ಧಿಯಲ್ಲಿ ಮಾಡಿದ ವೆಚ್ಚದಲ್ಲಿ ತನ್ನ ಪಾಲೂ ಉಂಟೆಂಬ ಹೆಮ್ಮೆಯಾಗುವದರ ಜೊತೆಗೆ ರಾಷ್ಟ್ರೀಯ ಕಾರ್ಯಕ್ರಮದಲ್ಲಿ ಸಕ್ರಿಯ ಪಾಲುಗಾರನಾಗುವ ಅವಕಾಶ ಸಿಗುತ್ತದೆ. ಸಾರ್ವಜನಿಕ ಕೆಲಸವೆಂದ ಕೂಡಲೇ ಅದು ನಮಗೆ ಸಂಬಂಧಿಸಿದ ವಿಷಯವಲ್ಲವೆಂಬ ತಾತ್ಸಾರ ಭಾವನೆ ನಮ್ಮಲ್ಲಿ ಇದೆ. ಆ ಕಾರಣದಿಂದಲೇ ಸರಕಾರದಿಂದ ನಿರ್ಮಿಸಲ್ಪಟ್ಟ ಕೆಲಸಗಳ ಮಟ್ಟ ಕಳಪೆಯದಾಗಿರುತ್ತದೆ. ಅದು ನಮ್ಮದೆಂಬ ಭಾವನೆ ಉಂಟಾದರೆ ನಾವು ಅಂಥ ಕಳಪೆ ಕೆಲಸಕ್ಕೆ ಖಂಡಿತ ಆಸ್ಪದ ಕೊಡುವದಿಲ್ಲ.

೫. ತೆರಿಗೆ ಉತ್ಪಾದಕತೆಗೆ ಚಾಲನೆ ಕೊಡುವಂತಿರಬೇಕು. ಒಬ್ಬನ ಆದಾಯ ಇನ್ನೊಬ್ಬನ ವೆಚ್ಚವೆಂಬ ಉಕ್ತಿ ಅರ್ಥಶಾಸ್ತ್ರದಲ್ಲಿದೆ. ಹಾಗೆಂದು ಮಾಡಿದ ಎಲ್ಲ ವೆಚ್ಚಗಳೂ ಸಮರ್ಥನೀಯವಲ್ಲ. ಅನುತ್ಪಾದಕ ಐಷಾರಾಮದ ವಸ್ತುಗಳ ಮೇಲೆ ಹೇರಿದ ತೆರಿಗೆ ರಾಷ್ಟ್ರಕ್ಕೆ ಆದಾಯ ತರುವದಲ್ಲದೆ, ನಾಗರಿಕರು ಅಂಥಹ ವೆಚ್ಚವನ್ನು ಕಡಿಮೆ ಮಾಡಲು ಪ್ರೇರೇಪಿಸುತ್ತದೆ. ಹಾಗೆ ಉಳಿಸಿದ ಹಣ ಬಂಡವಾಳ ರೂಪದಲ್ಲಿ ಶೇಖರಣೆಯಾಗಿ ಹೆಚ್ಚಿನ ಉತ್ಪಾದನೆಗೆ ನಾಂದಿಯಾಗುತ್ತದೆ. ಆದರೆ ಉತ್ಪಾದಕ ಮೂಲಗಳ ಮೇಲೆ ಹೇರಿದ ತೆರಿಗೆ ಅಂಥ ವಸ್ತುಗಳ ಬೇಡಿಕೆಯನ್ನು ಕಡಿಮೆಗೊಳಿಸುವದರಿಂದ ಮುಂದಿನ ಉತ್ಪಾದನೆ ಕುಂಠಿತಗೊಳ್ಳಬಹುದು.

೬. ತೆರಿಗೆ ರಾಷ್ಟ್ರೀಯ ಭಾವನೆಯನ್ನು ಉದ್ದೀಪನಗೊಳಿಸುವಂತಿರಬೇಕು. ಸಾಮಾನ್ಯವಾಗಿ ದೇಶದ ಹಿತಕ್ಕೆ ತೊಂದರೆ ಉಂಟಾದ ಸಮಯದಲ್ಲಿ ನಮ್ಮಲ್ಲಿ ರಾಷ್ಟ್ರಪ್ರೇಮ

ಉಂಟಾಗಿ ನಾವೆಲ್ಲ ಒಂದು ಎಂಬ ಭಾವನೆ ಉಂಟಾಗುತ್ತದೆ. ಉಳಿದಂತೆ ನಾವು ನಮ್ಮ ನಮ್ಮ ಹಿತಚಿಂತನೆಯಲ್ಲಿಯೇ ಕಾಲ ಕಳೆಯುತ್ತೇವೆ. ರಾಷ್ಟ್ರರಕ್ಷಣೆ ಅಥವಾ ಅಭಿವೃದ್ಧಿಗಾಗಿ ಹಾಕಿದ ತೆರಿಗೆ ನಮ್ಮನ್ನು ಜಾಗೃತಗೊಳಿಸಿ ರಾಷ್ಟ್ರ ಸೇವೆಯ ಅವಶ್ಯಕತೆಯನ್ನು ನೆನಪಿಸಿ ಕೊಡುತ್ತದೆ. ಹೀಗಾಗಿ ರಾಷ್ಟ್ರ ಪ್ರೇಮವನ್ನು ಉದ್ದೀಪನಗೊಳಿಸಲು ಸಫಲವಾದ ತೆರಿಗೆ ಉತ್ತಮ ತೆರಿಗೆ.

೭. ತೆರಿಗೆ ನಿಶ್ಚಿತವೂ ಕಾರ್ಯಸಾಧುವೂ, ಹಾಗೂ ಹೊಂದಾಣಿಕೆಯದಾಗಿರಬೇಕು. ಭಾರತದಲ್ಲಿ ಜಾರಿಯಲ್ಲಿರುವ ಕಾಯಿದೆಗಳಲ್ಲಿ ತೆರಿಗೆ ಕಾಯಿದೆಯಷ್ಟು ಗೋಜಲಾದ ಕಾಯಿದೆ ಇನ್ನೊಂದಿಲ್ಲ. ಸಾಮಾನ್ಯ ಜನರಿಗಿರಲಿ, ಸುಶಿಕ್ಷಿತರಿಗೂ ಅವು ತಲೆನೋವು ತರುವಂತಹ ಕಲಮುಗಳನ್ನು ಅದು ಒಳಗೊಂಡಿದೆ. ಆ ಕಾರಣವಾಗಿಯೇ ತೆರಿಗೆ ಪದ್ಧತಿಯ ಸರಳೀಕರಣದ ಬಗ್ಗೆ ರಾಷ್ಟ್ರವ್ಯಾಪಿ ಚರ್ಚೆಯಾಗುತ್ತಿದೆಯಲ್ಲದೇ ಸರಕಾರ ಕೂಡ ತೆರಿಗೆ ಕಾಯಿದೆಯ ಸರಳೀಕರಣದಲ್ಲಿ ಆಸಕ್ತಿ ವಹಿಸಿದೆ. ತನ್ನ ಮೇಲೆ ಹೇರಿದ ತೆರಿಗೆಯ ಬಗ್ಗೆ ನಾಗರಿಕನಿಗೆ ಸಂಪೂರ್ಣ ಜ್ಞಾನವಿರುವಂತಿರಬೇಕು. ತಾನು ಎಷ್ಟು ತೆರಿಗೆ ಯಾವಾಗ ಹೇಗೆ ? ಕೊಡಬೇಕೆಂಬ ಮಾಹಿತಿ ತೆರಿಗೆ ಪದ್ಧತಿಯಲ್ಲಿ ಸರಿಯಾಗಿ ವಿವರಿಸಿರಬೇಕು. ಆದರೆ ಈಗ ನಮ್ಮಲ್ಲಿರುವ ಪದ್ಧತಿ ಸಾಮಾನ್ಯ ಆದಾಯಕರವನ್ನು ಕೊಡಬೇಕಾದರೂ ತೆರಿಗೆ ಸಲಹೆಗಾರರ ಮುಖ ನೋಡುವಂತೆ ಮಾಡಿದೆ.

೮. ಉತ್ತಮ ತೆರಿಗೆ ಲಕ್ಷಣದಲ್ಲಿರುವ ಮಹತ್ವದ ಅಂಶವೆಂದರೆ ತೆರಿಗೆ. ತೆರಿಗೆದಾತನಿಗೆ ಹೊರೆಯಾಗಬಾರದೆಂಬುದು, ಭಾರತದಲ್ಲಿಯೇ ಅತ್ಯಂತ ಸಂಭಾವಿತ ಉದ್ಯೋಗಪತಿಯೆನಿಸಿ

ರುವ ಜೇ. ಆರ್. ಡಿ. ಟಾಟಾರವರು ಒಂದು ಸಂದರ್ಶನದಲ್ಲಿ ಇತ್ತೀಚಿನವರೆಗೂ ನಾನು ಗಳಿಸಿದ ಪ್ರತಿ ರೂಪಾಯಿಯಲ್ಲಿ ೯೦ ಪೈಸೆಗಳಿಗಿಂತ ಹೆಚ್ಚು ಮೊತ್ತವನ್ನು ತೆರಿಗೆ ರೂಪದಲ್ಲಿ ಕೊಡುತ್ತಿದ್ದೆ' ಎಂದು ಹೇಳಿದ್ದಾರೆ. ಈ ಮಾತಿನಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲ. ಅರವತ್ತರ ದಶಕದಲ್ಲಿ ಭಾರತದಲ್ಲಿ ಆದಾಯ ತೆರಿಗೆಯು ಪ್ರಮಾಣ ಶೇಕಡಾ ೯೦ಕ್ಕಿಂತ ಹೆಚ್ಚು ಇತ್ತು. ಹೀಗೆ ಅತಿಯಾದ ತೆರಿಗೆ ಹೇರಿದರೆ ದುಡಿಯುವ ಹುಮ್ಮಸ್ಸು ಕುಗ್ಗಿ ಅವನು ಕಡಿಮೆ ದುಡಿಯಲು ಪ್ರೇರೇಪಿಸುತ್ತದೆ. ಕರದಾತರೆಲ್ಲ ದುಡಿತ ಕಡಿಮೆ ಮಾಡಿದರೆ ಉತ್ಪಾದಕತೆಯಲ್ಲಿ ಕುಂಠಿತವಾಗಿ ರಾಷ್ಟ್ರದ ಆರ್ಥಿಕ ಹಿನ್ನಡೆಗೆ ಕಾರಣವಾಗುವದು.

೯. ತೆರಿಗೆ ಪದ್ಧತಿ ತೆರಿಗೆ ಅಧಿಕಾರಿಗಳಿಂದ ಕಿರುಕುಳವುಂಟಾಗುವಂತಿರಬಾರದು. ಹಾಗಾಯಿತೆಂದರೆ ತೆರಿಗೆದಾರ ಅಂಥ ಕಿರುಕುಳ ತಪ್ಪಿಸುವ ಸಲುವಾಗಿ ಲಂಚದ ಜಾಲದಲ್ಲಿ ಸಿಗುತ್ತಾನೆ. ಇದು ಹಣ ಕಳೆದುಕೊಳ್ಳುವದರ ಜೊತೆಗೆ ಮನಕ್ಲೇಶಕ್ಕೂ ಕಾರಣವಾಗುತ್ತದೆ.

೧೦. ತೆರಿಗೆ ಪದ್ಧತಿ ತೆರಿಗೆ ತಪ್ಪಿಸುವದಕ್ಕೆ ಪ್ರೇರೇಪಣೆ ಕೊಡದಂತಿರಬೇಕು. ಕ್ಲಿಷ್ಟ ಮತ್ತು ಅತಿಶಯವಾದ ತೆರಿಗೆ, ತೆರಿಗೆ ತಪ್ಪಿಸುವದಕ್ಕೆ ಪ್ರೇರಪಿಸುತ್ತದೆ. ಇದೇ ಮುಂದೆ ಕಪ್ಪು ಹಣದ ಸೃಷ್ಟಿಗೆ ಕಾರಣವಾಗುತ್ತದೆ. ತೆರಿಗೆ ರಾಜಕಾರಣಿಗಳ ಕೈಯಲ್ಲಿ ಬ್ರಹ್ಮರಾಕ್ಷಸನಿದ್ದಂತೆ, ಅದನ್ನು ಸರಿಯಾಗಿ ಉಪಯೋಗಿಸಿದರೆ ಮಾತ್ರ ಅನುಕೂಲ. ಇಲ್ಲವಾದರೆ ಹುಲಿಯ ಮೇಲೆ ಸವಾರಿ ಮಾಡಿದಂತೆ. ಆ ಕಾರಣ ತೆರಿಗೆ ಹೇರುವವರಿಂದಾಗುವ ಅನಾಹುತವನ್ನು ಅರಿತು ಹಾಗಾಗದಂತೆ ಜಾಣತನದಿಂದ ಹೇರಿದ ತೆರಿಗೆಯೇ ಉತ್ತಮ ತೆರಿಗೆಯೆಂದು ಎನಿಸಬಲ್ಲದು.

## ೬. ಭಾರತದಲ್ಲಿ ತೆರಿಗೆ :

ತೆರಿಗೆ ಏಕೆ? ಎಂಬ ಪ್ರಶ್ನೆಗೆ ಈಗಾಗಲೇ ಉತ್ತರಿಸಿ ಆಗಿದೆ. ಸಾಮಾನ್ಯವಾಗಿ ಜಗತ್ತಿನಲ್ಲಿರುವ ಎಲ್ಲ ದೇಶಗಳಲ್ಲಿಯೂ ತೆರಿಗೆಯನ್ನು ವಿಧಿಸಲಾಗುತ್ತಿದೆಯಾದರೂ ಅವುಗಳ ಉದ್ದೇಶ ಮಾತ್ರ ದೇಶ, ಕಾಲ, ಪರಿಸ್ಥಿತಿಗೆ ತಕ್ಕಂತೆ ಬೇರೆ ಬೇರೆಯಾಗಿರುತ್ತದೆ. ಔದ್ಯೋಗಿಕವಾಗಿ ಮುಂದುವರಿದ ದೇಶಗಳಲ್ಲಿ ಆರ್ಥಿಕ ಅಭಿವೃದ್ಧಿಗೆ ನೆರವಾಗುವ ಬಂಡವಾಳದ ಕೊರತೆ ಇರುವದಿಲ್ಲ. ತಮಗೆ ಬೇಕಾದ ಬಂಡವಾಳವನ್ನು ತಾವೇ ನಿರ್ಮಿಸಿಕೊಳ್ಳಲು ಅವುಗಳಿಗೆ ಶಕ್ಯವಾಗುತ್ತದೆ. ಸಮಾಜ ಕಲ್ಯಾಣ, ಸರಕಾರ ನಿರ್ವಹಣೆ. ಸಂರಕ್ಷಣೆ ಮುಂತಾದವುಗಳಿಗೆ ಬೇಕಾದ ಹಣವನ್ನು ಸರಕಾರಿ ಆದಾಯದ ಇತರ ಮೂಲಗಳಿಂದ ದೊರಕಿಸಿಕೊಳ್ಳ ಬಲ್ಲವು. ಆದರೆ ಇಂಥ ಮುಂದುವರಿದ ರಾಷ್ಟ್ರಗಳಲ್ಲಿಯೂ ತೆರಿಗೆಯನ್ನು ಹೇರಲಾಗುತ್ತದೆ. ಕೆಲವು ವೇಳೆ ಅಭಿವೃದ್ಧಿ ಪರ ರಾಷ್ಟ್ರಗಳು ಹೇರಿದ ಮಟ್ಟಕ್ಕಿಂತ ಹೆಚ್ಚಿಗೆಯೂ ಇರಬಹುದು. ಆದರೆ ಈ ರೀತಿ ತೆರಿಗೆ ಹೇರುವ ಉದ್ದೇಶ ಕೇವಲ ಹಣ ಸಂಗ್ರಹಿಸುವದಾಗಿರದೆ ದೇಶದ ಆರ್ಥಿಕ ಮತ್ತು ಸಾಮಾಜಿಕ ಸ್ವಾಸ್ಥ್ಯವನ್ನು ಕಾಪಾಡುವದಾಗಿರುತ್ತದೆ. ದೇಶದಲ್ಲಿ ಅತಿಪ್ರಸರಣ ಉಂಟಾದಾಗ ಅಧಿಕ ತೆರಿಗೆ ಹೇರಿ ಹಾಗೂ ಆರ್ಥಿಕ ಹಿನ್ನೆಡೆ ಉಂಟಾದಾಗ ತೆರಿಗೆ ನೀತಿಯನ್ನು ಉದಾರಗೊಳಿಸುವ ಮೂಲಕ ಮಾರುಕಟ್ಟೆಯಲ್ಲಿಯ ಬೇಡಿಕೆ ಪೂರೈಕೆಯನ್ನು ಸ್ಥಿರವಾಗಿರಿಸುವ ಸಾಧನವಾಗಿ ತೆರಿಗೆ ಉಪಯೋಗಿಸಲ್ಪಡುತ್ತದೆ. ಆಯಾತ ನಿರ್ಯಾತ ವ್ಯಾಪಾರದಲ್ಲಿ ಏರು ಪೇರು ಉಂಟಾದಾಗ ವಿದೇಶಿ

ವಿನಿಮಯದ ಕೊರತೆಯನ್ನು ಸರಿದೂಗಿಸಲು ಅಥವಾ ದೇಶೀಯ ಉದ್ದಿಮೆಗಳಿಗೆ ರಕ್ಷಣೆ ಕೊಡುವ ಉದ್ದೇಶದಿಂದ ಆಯಾತದ ಮೇಲೆ ಭಾರವಾದ ತೆರಿಗೆ ಹೇರಿ ನಿರ್ಯಾತಕ್ಕೆ ಸಹಾಯವಾಗುವಂಥ ತೆರಿಗೆ ನೀತಿಯನ್ನು ಅನುಸರಿಸಬಹುದು. ಸಾಮಾಜಿಕ ಅಸಮಾನತೆಯನ್ನು ಹೋಗಲಾಡಿಸಲು ಹಾಗೂ ನಿರುದ್ಯೋಗ ನಿವಾರಣೆಯ ಕ್ರಮವಾಗಿ ಅಧಿಕ ಆದಾಯವಿರುವವರ ಮೇಲೆ ಹೆಚ್ಚಿನ ತೆರಿಗೆ ಹೇರಿ, ಬಡವರಿಗೆ ಸಹಾಯವಾಗುವಂಥ ಉದ್ಯೋಗವನ್ನು ನಿರ್ಮಿಸುವ ಕೆಲಸಗಳ ಮೇಲೆ ವೆಚ್ಚಮಾಡಬಹುದು. ಮುಂದುವರಿದ ದೇಶಗಳಲ್ಲಿ ತೆರಿಗೆ ಔಷಧಿಯಂತೆ ಉಪಯೋಗಿಸಲ್ಪಡುವದೇ ಹೊರತು ಆಹಾರದಂತೆ ಅಲ್ಲ.

ಆದರೆ ಭಾರತದಂತ ಹಿಂದುಳಿದ ಅಭಿವೃದ್ಧಿಪರ ದೇಶಗಳ ಪರಿಸ್ಥಿತಿ ಬೇರೆಯೇ ಆಗಿರುತ್ತದೆ. ಇಂಥ ರಾಷ್ಟ್ರಗಳು ಎದುರಿಸುತ್ತಿರುವ ಸಮಸ್ಯೆಗಳು ಬಹುಮುಖವಾಗಿವೆ. ಆಡಳಿತ ನಡೆಸುವ ಸರಕಾರಗಳು ದೇಶದ ಬಡತನ, ದಾರಿದ್ರ್ಯ, ನಿರುದ್ಯೋಗ, ಅಜ್ಞಾನದ ವಿರುದ್ಧ ಸಮರ ಹೂಡುವದರ ಜೊತೆಗೇ ದೇಶವನ್ನು ಅಭಿವೃದ್ಧಿಯತ್ತ ಕೊಂಡೊಯ್ಯುವ ದಿಶೆಯಲ್ಲಿಯೂ ಪ್ರಯತ್ನಿಸಬೇಕಾಗುತ್ತದೆ. ಅಭಿವೃದ್ಧಿಗೆ ಬೇಕಾಗುವ ಮೂಲಭೂತ ಅವಶ್ಯಕತೆಗಳನ್ನು ಒದಗಿಸಿಕೊಳ್ಳಲು ಅಪಾರ ಹಣ ಸಂಗ್ರಹಿಸಬೇಕಾಗುತ್ತದೆ. ಕಾರಣ ಅಭಿವೃದ್ಧಿಪರ ರಾಷ್ಟ್ರಗಳು ತೆರಿಗೆ ವಿಧಿಸುವ ಮೂಲ ಉದ್ದೇಶವು ಹಣ ಸಂಗ್ರಹಿಸುವದೇ ಆಗಿರುತ್ತದೆ. ಹಾಗಾಗಿ ಅಭಿವೃದ್ಧಿ ಪರ ರಾಷ್ಟ್ರಗಳಲ್ಲಿ ಇರುವ ತೆರಿಗೆ ಪದ್ಧತಿ ತೆರಿಗೆ ಶಾಸ್ತ್ರದಲ್ಲಿ ಹೇಳಿದ ಉತ್ತಮ ಮಾದರಿಯಾಗಿರಲು ಸಾಧ್ಯವಿಲ್ಲ. ದೇಶದ ಮುಂದಿನ ಒಳಿತಿಗಾಗಿ ಮುಂದಿನ ಪೀಳಿಗೆಯ

ಭವಿಷ್ಯಕ್ಕಾಗಿ ಅಧಿಕ ಪ್ರಮಾಣದಲ್ಲಿ ಹೇರಿದ ಬಹುಮುಖಿ ತೆರಿಗೆ
ಯನ್ನು ಕೊಡುವವರ ಮೂಲಕ ನಾಗರಿಕನು ತ್ಯಾಗ ಮಾಡಲೇ
ಬೇಕಾಗುವದು. ಅಭಿವೃದ್ಧಿಪರ ದೇಶಗಳಲ್ಲಿ ತೆರಿಗೆಯನ್ನು
ಔಷಧಿಯಂತೆ ಉಪಯೋಗಿಸದೆ ಆಹಾರದಂತೆ ಉಪಯೋಗಿಸ
ಲಾಗುವದು. ಆದರೆ ತೆರಿಗೆಯೇ ಸಾರ್ವಜನಿಕ ಹಣಕಾಸಿನ
ಮುಖ್ಯ ಸಾಧನವಾಗಿರುತ್ತದೆ. ಹಾಗಾಗಿ ಕೆಲವೊಮ್ಮೆ ಅತಿಭಾರ
ವಾಗುವ ಸಂಭವವೂ ಉಂಟು.

ಭಾರತವು ಒಂದು ಸಂಯುಕ್ತ ಗಣರಾಜ್ಯಗಳ ಒಕ್ಕೂಟ
ವಾದುದರಿಂದ ಆಡಳಿತದಲ್ಲಿ ಕೇಂದ್ರ ಮತ್ತು ರಾಜ್ಯಗಳೆಂಬ
ಎರಡು ಘಟಕಗಳಿದ್ದು ಅವುಗಳಿಗೆ ತಮ್ಮದೇ ಆದ ಸಂವಿಧಾನ
ದತ್ತವಾದ ಅಧಿಕಾರ ಮತ್ತು ಹೊಣೆಗಾರಿಕೆಗಳಿವೆ. ಕೇಂದ್ರ
ಮತ್ತು ರಾಜ್ಯಗಳ ಕಕ್ಷೆಗಳು ಮತ್ತು ಅವಕ್ಕೆ ಬೇಕಾಗುವ ಹಣ
ಕಾಸಿನ ವ್ಯವಸ್ಥೆಯು ವಿಷಯವಾಗಿ ಸಂವಿಧಾನದ ಏಳನೇ ಅನು
ಸೂಚಿಯಲ್ಲಿ ((Schedule)) ಸರಿಯಾಗಿ ವಿವರಿಸಲಾಗಿದೆ.
ದೇಶದ ಸಮಗ್ರ ಹಿತ ದೃಷ್ಟಿಯಲ್ಲಿಟ್ಟುಕೊಂಡು ರಾಷ್ಟ್ರರಕ್ಷಣೆ,
ವಿದೇಶ ವ್ಯಾಪಾರ. ಅಂಚೆ ತಂತಿ. ರೇಲ್ವೆ. ನೋಟು ಮುದ್ರಣ
ಮುಂತಾದವುಗಳು ಕೇಂದ್ರದ ಆಡಳಿತಕ್ಕೆ ಒಳಪಟ್ಟಿರುವವಾದರೆ.
ರಾಜ್ಯದ ಒಳಾಡಳಿತ. ಪೋಲೀಸು. ನ್ಯಾಯವ್ಯವಸ್ಥೆ. ನೀರಾವರಿ.
ಒಕ್ಕಲುತನ. ಶಿಕ್ಷಣ, ಸಾರ್ವಜನಿಕ ಆರೋಗ್ಯ. ಸಮಾಜ ಕಲ್ಯಾಣ
ಮುಂತಾದ ವಿಷಯಗಳು ರಾಜ್ಯಗಳ ಕಕ್ಷೆಯಲ್ಲಿ ಬರುತ್ತವೆ.

ಕೇಂದ್ರ ರಾಜ್ಯಗಳ ಕಕ್ಷೆಯಲ್ಲಿ ಬರುವ ಹಣಕಾಸಿನ ಬಾಬ್ತ
ವಿಷಯವಾಗಿ ಕೂಡ ಸಂವಿಧಾನದ ಏಳನೇ ಅನುಸೂಚಿಯಲ್ಲಿ
ವಿವರಿಸಲಾಗಿದೆ. ಈ ಅನುಸೂಚಿಯಲ್ಲಿ ಮುಖ್ಯವಾಗಿ ಮೂರು

ಯಾದಿಗಳಿವೆ. ಒಂದನೇ ಯಾದಿಯನ್ನು ಕೇಂದ್ರ ಯಾದಿಯೆಂದು ಎರಡನೆಯ ಯಾದಿಯನ್ನು ರಾಜ್ಯಗಳ ಯಾದಿಯೆಂದು ಮತ್ತು ಮೂರನೆಯ ಯಾದಿಯನ್ನು ಕೇಂದ್ರ ಮತ್ತು ರಾಜ್ಯಗಳ ಸಂಯುಕ್ತ ಯಾದಿಯೆಂದು ಹೆಸರಿಸಬಹುದು. ಸಂಸತ್ತು ಅಥವಾ ರಾಜ್ಯ ವಿಧಾನ ಸಭೆಗಳು ಶಾಸನವನ್ನು ಮಾಡುವಮೂಲಕ ಮೂರನೇ ಯಾದಿಯಲ್ಲಿರುವ ವಿಷಯಗಳ ಉಪಯೋಗ ಮಾಡಿಕೊಳ್ಳಬಲ್ಲವು.

ಕೇಂದ್ರ ಯಾದಿಯಲ್ಲಿ ೯೭ ಮೂಲಗಳಿದ್ದು ಸಂವಿಧಾನ ದಲ್ಲಿ ಅವುಗಳನ್ನು ಆಕರಿಸುವ, ವಸೂಲಿ ಮಾಡಿ ಉಪಯೋಗಿ ಸುವ ಬಗ್ಗೆಯೂ ವಿವರವಾದ ಹಾಗೂ ಖಚಿತ ಮಾಹಿತಿ ಇದೆ. ಆಕರಣೆ, ವಸೂಲಿ ಮತ್ತು ಉಪಯೋಗಕ್ಕೆ ಸಂಬಂಧಿಸಿದಂತೆ ಕೇಂದ್ರ ಪಟ್ಟಿಯಲ್ಲಿರುವ ತೆರಿಗೆಯನ್ನು ನಾಲ್ಕು ಭಾಗಗಳನ್ನಾಗಿ ವಿಂಗಡಿಸಲಾಗಿದೆ. ಅವು ಈ ರೀತಿ ಇವೆ:

೧. ಕೇಂದ್ರವು ಆಕರಿಸಿ, ಕೇಂದ್ರದಿಂದ ವಸೂಲಿ ಮಾಡ ಲ್ಪಟ್ಟು ಕೇಂದ್ರವೇ ಉಪಯೋಗಿಸುವ ತೆರಿಗೆಗಳು. ಇದರಲ್ಲಿ ಕಂಪನಿ ತೆರಿಗೆ, ಆಯಾತ ನಿರ್ಯಾತಗಳ ಮೇಲಿನ ತೆರಿಗೆ. ಬಂಡ ವಾಳದ (ಒಕ್ಕಲುತನದಲ್ಲಿ ಹೂಡಿದ ಬಂಡವಾಳ ಹೊರತು ಪಡಿಸಿ) ಮೇಲಿನ ತೆರಿಗೆ ಮುಂತಾದವು ಒಳಗೊಂಡಿವೆ.

೨. ಕೇಂದ್ರದಿಂದ ಹೇರಲ್ಪಟ್ಟು ಕೇಂದ್ರವೇ ವಸೂಲಿ ಮಾಡಿ ರಾಜ್ಯಗಳೊಡನೆ ಹಂಚಿಕೊಳ್ಳುವ ತೆರಿಗೆಗಳ ಪಟ್ಟಿ. ಈ ರೀತಿಯ ತೆರಿಗೆಗಳಲ್ಲಿ ಆದಾಯಕರ (ಒಕ್ಕಲುತನದ ಆದಾಯ ಹೊರತು ಪಡಿಸಿ) ಮತ್ತು ಕೇಂದ್ರ ಸುಂಕಗಳು ಒಳಗೊಂಡಿವೆ. ಆದರೆ ಈ ತೆರಿಗೆಗಳ ಮೇಲೆ ಹೇರುವ ವಿಶೇಷ ಕರ(Surcharge) ಗಳ ಮೇಲೆ ರಾಜ್ಯಗಳ ಅಧಿಕಾರವಿರುವದಿಲ್ಲ.

೩. ಕೇಂದ್ರದಿಂದ ಆಕರಿಸಲ್ಪಟ್ಟು ಕೇಂದ್ರವೇ ವಸೂಲಿ ಮಾಡಿ ಸಂಪೂರ್ಣವಾಗಿ ರಾಜ್ಯಗಳಿಗೆ ಹಂಚುವ ತೆರಿಗೆ ಪಟ್ಟಿ. ಈ ಮಾಲಿಕೆಯಲ್ಲಿ ಸ್ಥಿರ ಆಸ್ತಿ ತೆರಿಗೆ, ರೇಲ್ವೆ ಹಡಗು ಮತ್ತು ವಿಮಾನಗಳಲ್ಲಿ ಸಾಗಿಸುವ ಸರಕು ಅಥವಾ ಪ್ರವಾಸಿಗರ ಹಾಸಲುಗಳ ಮೇಲೆ ಹೇರಿದ ವಿಶೇಷ ತೆರಿಗೆ ಮುಂತಾದವುಗಳು ಬರುತ್ತವೆ.

೪. ಕೇಂದ್ರದಿಂದ ಆಕರಿಸಲ್ಪಟ್ಟು, ರಾಜ್ಯಗಳು ವಸೂಲಿ ಮಾಡಿ ರಾಜ್ಯಗಳೇ ಇಟ್ಟುಕೊಳ್ಳುವ ತೆರಿಗೆಗಳ ಪಟ್ಟಿ. ಕೇಂದ್ರ ಪಟ್ಟಿಯಲ್ಲಿ ಸೇರಿರುವ ಸ್ಟಾಂಪಕರ ಮುಂತಾದವುಗಳು ಇದರಲ್ಲಿ ಸೇರಿವೆ. ಎರಡನೇ ಮತ್ತು ಮೂರನೇ ಪಟ್ಟಿಯಲ್ಲಿರುವ ತೆರಿಗೆಗಳ ಮೇಲೆ ಹೆಚ್ಚುವರಿ ತೆರಿಗೆ ವಿಧಿಸಿ ಕೇಂದ್ರವೇ ಉಪಯೋಗಿಸಿಕೊಳ್ಳಬಹುದು.

ರಾಜ್ಯಗಳ ತೆರಿಗೆ ಯಾದಿಯಲ್ಲಿ ಮುಖ್ಯವಾಗಿ ಭೂಕಂದಾಯ, ಒಕ್ಕಲುತನದ ಆದಾಯದ ಮೇಲಿನ ತೆರಿಗೆ, ಒಕ್ಕಲುತನದ ಭೂಮಿಯ ಮೇಲಿನ ತೆರಿಗೆ, ರಾಜ್ಯಕ್ಕೆ ಸಂಬಂಧಿಸಿದ ಗಣಿ ಉದ್ದಿಮೆ, ಅಫೀಮು, ಸರೆ ಸೇಂದಿಗಳ ಮೇಲಿನ ಸುಂಕ, ಖರೀದಿ ಮತ್ತು ಮಾರಾಟದ ಮೇಲಿನ ತೆರಿಗೆ, ಮನರಂಜನೆ ತೆರಿಗೆ, ವೃತ್ತಿ ತೆರಿಗೆ ಮುಂತಾದವುಗಳು ಸೇರಿರುತ್ತವೆ.

ಭಾರತದ ಸಂವಿಧಾನವು ವಿಕೇಂದ್ರಿಕೃತ ಮಾದರಿಯ ಸರಕಾರಕ್ಕೆ ಅನುವು ಮಾಡಿಕೊಟ್ಟರೂ ಬಲಿಷ್ಠ ಕೇಂದ್ರ ಸರಕಾರದ ಅವಶ್ಯಕತೆಯನ್ನು ಸಂವಿಧಾನ ಶಿಲ್ಪಿಗಳು ಮನಗಂಡಿದ್ದರೆಂಬುದು ಕೇಂದ್ರ ಸರಕಾರಕ್ಕೆ ಕೊಟ್ಟ ಅಧಿಕಾರ ಹಾಗೂ ಕೇಂದ್ರ ಪಟ್ಟಿಯಲ್ಲಿ ಬರುವ ಆದಾಯದ ಯಾದಿಯಿಂದ ಸ್ಪಷ್ಟವಾಗುತ್ತದೆ. ಅದೂ ಅಲ್ಲದೆ ಸಂವಿಧಾನದ ಏಳನೇ ಅನುಸೂಚಿಯಲ್ಲಿ ವಿವರಿಸಿದಂತೆ ಕೇಂದ್ರ ಮತ್ತು ರಾಜ್ಯಗಳ ನಡುವೆ ಹಂಚಲ್ಪಡುವ

ಆದಾಯದ ಪ್ರಮಾಣ ಹಾಗೂ ತತ್ವಗಳ ಬಗ್ಗೆ ಮುಂದೆ ಬರಬಹುದಾದ ತೊಂದರೆಗಳ ವಿಷಯವಾಗಿಯೂ ಅವರಿಗೆ ಸಂಪೂರ್ಣ ಅರಿವಿತ್ತು. ಆ ಕಾರಣದಿಂದಲೇ ಈ ವಿಷಯವಾಗಿ ಉದ್ಭವಿಸುವ ಸಮಸ್ಯೆಗಳ ಅಭ್ಯಾಸ ಮಾಡಿ ಪರಿಹಾರ ಸೂಚಿಸಲು ಐದು ವರ್ಷಗಳಿಗೊಮ್ಮೆ ಹಣಕಾಸು ಆಯೋಗವನ್ನು ನಿಯಮಿಸುವ ಅಧಿಕಾರವನ್ನು ಸಂವಿಧಾನದ ೨೮೦ನೇ ವಿಧಿಯನ್ವಯ ರಾಷ್ಟ್ರಪತಿಗಳು ಪಡೆದಿರುತ್ತಾರೆ. ಆಯೋಗವು ಮುಖ್ಯವಾಗಿ ಕೇಂದ್ರ ಸಂಗ್ರಹಿಸಿದ ಹಣವನ್ನು ಕೇಂದ್ರ ಮತ್ತು ರಾಜ್ಯಗಳ ನಡುವೆ ಹಂಚುವ ವಿಧಾನ. ಯಾವುದೇ ರಾಜ್ಯಕ್ಕೆ ಅಧಿಕ ಧನ ಸಹಾಯ ಕೊಡಬೇಕಾದರೆ ಅನುಸರಿಸಬೇಕಾದ ತತ್ವಗಳು ಹಾಗೂ ತೆರಿಗೆ ಸುಧಾರಣೆಗೆ ಅಳವಡಿಸುವ ಸಲುವಾಗಿ ಅನುಸರಿಸಬೇಕಾದ ನೀತಿ ಮುಂತಾದವುಗಳ ಬಗ್ಗೆ ಅಧ್ಯಯಿಸಿ ವರದಿ ಸಲ್ಲಿಸಬೇಕಾಗುವುದು. ಈ ವರದಿಯನ್ನು ವಿವರಣೆಯೊಡನೆ ಸಂಸತ್ತಿನಲ್ಲಿ ಮಂಡಿಸಿ ಸಂಸತ್ತಿನಿಂದ ಒಪ್ಪಿಗೆ ಪಡೆದ ಮೇಲೆ ಅದು ಅನುಷ್ಠಾನಕ್ಕೆ ಬರುತ್ತದೆ. ಭಾರತದಲ್ಲಿ ಕಾಲಕಾಲಕ್ಕೆ ಅನುಸರಿಸಬೇಕಾದ ನೀತಿಯ ಕುರಿತು ಈ ವರೆಗೆ ಏಳು ಹಣಕಾಸು ಆಯೋಗಗಳು ವರದಿ ಸಲ್ಲಿಸಿವೆ.

ಸ್ವಾತಂತ್ರ್ಯ ಬಂದ ಹೊಸತರಲ್ಲಿ ಸಾಮಾನ್ಯವಾಗಿ ಕೇಂದ್ರ ಮತ್ತು ಎಲ್ಲ ರಾಜ್ಯಗಳಲ್ಲಿ ಒಂದೇ ಪಕ್ಷದ ಸರಕಾರ ಇರುತ್ತಿದ್ದುದರಿಂದ ಕೇಂದ್ರ ಮತ್ತು ರಾಜ್ಯಗಳ ನಡುವೆ ಹಣಕಾಸಿನ ವಿಷಯವಾಗಿ ಘರ್ಷಣೆ ತೀವ್ರತರವಾಗಿರಲಿಲ್ಲ. ಕೇಂದ್ರ ಮತ್ತು ರಾಜ್ಯಗಳ ಆದಾಯ ಪಟ್ಟಿಯನ್ನು ಪರಿಶೀಲಿಸಿದಾಗ ನಮಗೆ ಕಾಣುವ ಮುಖ್ಯ ಅಂಶಗಳೆಂದರೆ ರಾಜ್ಯಗಳ ಪಟ್ಟಿಯಲ್ಲಿ ಇರುವ ಆದಾಯ

ಮೂಲಗಳು ಸೀಮಿತವಾಗಿವೆಯಲ್ಲದೆ ಅವುಗಳ ಮೇಲೆ ಹೇರ ಬಹುದಾದ ತೆರಿಗೆಗಳಿಗೂ ಮಿತಿ ಇದೆ. ಆದರೆ ಕೇಂದ್ರ ಸುಂಕ, ಕಸ್ಟಮ್ಸ್ ಸುಂಕ, ಆದಾಯ ತೆರಿಗೆ ಸಾರ್ವಜನಿಕ ಸಾಲ, ವಿದೇಶಿ ನೆರವು, ಎಲ್ಲಕ್ಕಿಂತ ಹೆಚ್ಚಾಗಿ ನೋಟುಗಳ ಮುದ್ರಣದಿಂದ ಕೇಂದ್ರ ತನ್ನ ಕೊರತೆಯನ್ನು ತುಂಬಿಕೊಳ್ಳಬಲ್ಲುದು. ರಾಜ್ಯ ಗಳ ಹೊಣೆಗಾರಿಕೆಗಳೂ ಕೂಡ ದಿನದಿಂದ ದಿನಕ್ಕೆ ಹೆಚ್ಚುತ್ತಿವೆ ಯಾದರೂ ಅವುಗಳ ಆದಾಯ ಮೂಲ ಆ ಪ್ರಮಾಣದಲ್ಲಿ ಹೆಚ್ಚುವದಿಲ್ಲ. ಹಾಗಾಗಿ ಹೆಚ್ಚಿನ ಸಹಾಯಕ್ಕೆ ಅವು ಕೇಂದ್ರದ ಕೃಪಾ ದೃಷ್ಟಿಗೆ ಒಳಗಾಗ ಬೇಕಾದ ಪ್ರಸಂಗವುಂಟಾಗಿದೆ. ಇತ್ತೀ ಚಿನ ದಿನಗಳಲ್ಲಿ ಸಾಕಷ್ಟು ರಾಜ್ಯಗಳಲ್ಲಿ ವಿರೋಧಿ ಪಕ್ಷದ ಸರಕಾರಗಳಿರುವದರಿಂದ ಕೇಂದ್ರವು ಹಣಕಾಸಿನ ಹಂಚಿಕೆಯಲ್ಲಿ ಮಲತಾಯಿ ಧೋರಣೆ ತೋರಿಸುತ್ತದೆ ಎಂಬ ಭಾವನೆ ಆ ಸರಕಾರಗಳಲ್ಲಿ ಇದೆ. ಕೇಂದ್ರವು ರಾಜ್ಯ ಸರಕಾರವನ್ನು ಪಂಚಾ ಯಿತಿ ಮಟ್ಟಕ್ಕಿಳಿಸಿದೆ ಎಂಬುದು ವಿರೋಧಿ ಪಕ್ಷಗಳ ಅಭಿಪ್ರಾಯ. ರಾಜ್ಯಗಳಿಗೆ ಅಪರಿಮಿತ ಅಧಿಕಾರ ಹಾಗೂ ಹಣಕಾಸಿನ ಮೂಲ ಗಳನ್ನು ಒದಗಿಸಲಾಗಿದೆಯೆಂಬುದು ಕೇಂದ್ರದ ಅಭಿಮತ. ಕೇಂದ್ರ ಮತ್ತು ರಾಜ್ಯ ಸರಕಾರಗಳ ಅಭಿಪ್ರಾಯ ರಾಜಕೀಯ ಪ್ರೇರಿತವಾಗಿವೆಯಾದರೂ ಸಂಪನ್ಮೂಲಗಳನ್ನು ಹಂಚುವಲ್ಲಿ ಮತ್ತು ವಿಶೇಷ ನೆರವು ಕೊಡುವಲ್ಲಿ ಒಪ್ಪಿಕೊಂಡ ತತ್ವಗಳ ಜೊತೆಗೆ ರಾಜಕೀಯವೂ ಪ್ರಬಲ ಪಾತ್ರ ವಹಿಸುತ್ತಿದೆ ಎಂಬುದು ಸುಶಿಕ್ಷಿತ ಸಾರ್ವಜನಿಕರ ಸಾಮಾನ್ಯ ಅಭಿಪ್ರಾಯವೂ ಆಗಿದೆ ಎಂಬ ಅಂಶವನ್ನು ಕಡೆಗಣಿಸಲಾಗದು.

## ೬. ತೆರಿಗೆಯಲ್ಲಿ ನ್ಯೂನತೆ :

ರಾಜಕೀಯ ಪ್ರೇರಿತ ಅಭಿಪ್ರಾಯಗಳು ಏನೇ ಇದ್ದರೂ ಭಾರತೀಯತೆರಿಗೆ ಪದ್ಧತಿಯಲ್ಲಿ ಅನೇಕ ದೋಷಗಳಿರುವದು ಅಂಕೆ-ಸಂಖ್ಯೆಗಳಿಂದ ಗೊತ್ತಾಗುತ್ತದೆ- ಉದಾಹರಣೆಗೆ: ರಾಷ್ಟ್ರದ ಒಟ್ಟು ಆದಾಯದಲ್ಲಿ ಶೇ. ೪೦ರಷ್ಟು ಆದಾಯ ಒಕ್ಕಲುತನದ ಮೂಲಗಳಿಂದ ಬರುತ್ತಿವೆಯಾದರೂ ಆ ಮೂಲಗಳಿಂದ ಸಂದಾಯವಾಗುತ್ತಿರುವ ತೆರಿಗೆ ಪ್ರಮಾಣ ೧೯೮೫ರಲ್ಲಿ ಒಟ್ಟು ತೆರಿಗೆಯ ಶೇಕಡಾ ೪ಕ್ಕಿಂತ ಕಡಿಮೆ ಇದೆ. ಇದಕ್ಕೆ ಒಂದು ಕಾರಣ ಭಾರತದ ರೈತನ ಸಾಮಾನ್ಯ ಆದಾಯ ಕಡಿಮೆ ಇರುವದಾದರೆ, ಇನ್ನೊಂದು ರಾಜಕೀಯ ಕಾರಣವಾಗಿದೆ. ಒಕ್ಕಲುತನದ ಆದಾಯದ ಮೇಲೆ ತೆರಿಗೆ ವಿಧಿಸುವ ಅಧಿಕಾರ ರಾಜ್ಯಗಳ ಪಟ್ಟಿಯಲ್ಲಿ ಸೇರಿದೆ. ದೇಶದಲ್ಲಿ ಬಡರೈತರ ಸಂಖ್ಯೆ ಬಹಳವಾಗಿದ್ದರೂ, ದೊಡ್ಡ ಹಿಡುವಳಿದಾರರು ಮತ್ತು ತೋಟದ ಮಾಲಿಕರನ್ನು ಅಲಕ್ಷಿಸುವಂತಿಲ್ಲ. ರಾಜ್ಯ ಸರಕಾರಗಳು ಚುನಾವಣೆಯನ್ನು ದೃಷ್ಟಿಯಲ್ಲಿಟ್ಟುಕೊಂಡು ಬಹುಸಂಖ್ಯಾತರಾದ ರೈತಾಪಿ ಜನರಿಂದ ಬರುವ ವಿರೋಧದ ಹೆದರಿಕೆಯಿಂದ ಅಂತವರ ಮೇಲೆ ಕರಹೇರಲು ಹಿಂಜರಿಯುತ್ತವೆ. ಆ ಕಾರಣ ಅಧಿಕ ಆದಾಯವಿರುವ ಅನೇಕ ಜಮೀನುದಾರರು, ತೋಟದ ಮಾಲಿಕರು, ತೆರಿಗೆ ಬಲೆಯಿಂದ ಸುಲಭವಾಗಿ ತಪ್ಪಿಸಿಕೊಳ್ಳುತ್ತಾರೆ. ರಾಜ್ಯಗಳು ಆದಾಯ ಮೂಲಗಳನ್ನು ಸರಿಯಾಗಿ ಬಳಸಿಕೊಳ್ಳದೇ ಕೇಂದ್ರದ ಮೇಲೆಯೇ ಹೆಚ್ಚು ಹೆಚ್ಚಾಗಿ ಅವಲಂಬಿಸುತ್ತವೆ ಎಂಬ ಕೇಂದ್ರದ ಆರೋಪದಲ್ಲಿ ಕೂಡ ಸತ್ಯಾಂಶವಿದೆ.

ಭಾರತದ ತೆರಿಗೆ ಪದ್ಧತಿಯಲ್ಲಿರುವ ಇನ್ನೊಂದು ಅನಾನು ಕೂಲತೆಯೆಂದರೆ ಪ್ರತ್ಯಕ್ಷ ಮತ್ತು ಅಪ್ರತ್ಯಕ್ಷ ತೆರಿಗೆಗಳಲ್ಲಿರುವ ಅಂತರ. ಮುಂದುವರಿದ ದೇಶಗಳಲ್ಲಿ ಪ್ರತ್ಯಕ್ಷ ತೆರಿಗೆ ಪ್ರಮಾಣ ಅಪ್ರತ್ಯಕ್ಷ ತೆರಿಗೆ ಪ್ರಮಾಣಕ್ಕಿಂತ ಅಧಿಕವಾಗಿರುತ್ತದೆ. ಅದ ರಿಂದ ಹೆಚ್ಚಿಗೆ ಆದಾಯ ಪಡೆಯುವವರ ಮೇಲೆ ಹೆಚ್ಚಿಗೆ ಹೊರೆ ಬೀಳುವದೆಂದು ಅರ್ಥ. ಆದರೆ ಭಾರತದಲ್ಲಿ ಪ್ರತ್ಯಕ್ಷ ತೆರಿಗೆ ಗಿಂತ ಅಪ್ರತ್ಯಕ್ಷ ತೆರಿಗೆ ಪ್ರಮಾಣ ಅಧಿಕವಾಗಿದೆ. ಉದಾ ಹರಣೆಗೆ ೧೯೫೦–೫೧ರಲ್ಲಿ ಪ್ರತ್ಯಕ್ಷ ತೆರಿಗೆ ೧೩೦ ಕೋಟಿ ರೂಪಾಯಿಗಳಿದ್ದು ಅಪ್ರತ್ಯಕ್ಷ ತೆರಿಗೆಯಿಂದ ಸಂಗ್ರಹಿಸಿದ ಹಣ ೨೭೮ ಕೋಟಿ ಆಗಿತ್ತು. ಆದರೆ ಈ ಮೊತ್ತ ೧೯೮೫–೮೬ರಲ್ಲಿ ಅನುಕ್ರಮವಾಗಿ ೩೭೭೩ ಮತ್ತು ೧೫೧೪೦ ಕೋಟಿಗೆ ಏರಿದೆ. ಅಪ್ರತ್ಯಕ್ಷ ತೆರಿಗೆಯಲ್ಲಿ ವೃದ್ಧಿ ಎಂದರೆ ಸಾಮಾನ್ಯ ಜನತೆಯ ಮೇಲೆ ಅಧಿಕ ಹೊರೆ ಎಂದೇ ಅರ್ಥ.

ಪ್ರತ್ಯಕ್ಷ ತೆರಿಗೆಯಲ್ಲಿ ಆದಾಯಕರ, ಕಂಪನಿ ಕರ, ಆಸ್ತಿಕರ ಮುಂತಾದವುಗಳು ಬರುತ್ತವೆ, ಭಾರತದಲ್ಲಿ ಆದಾಯ ಕೊಡು ವವರ ಸಂಖ್ಯೆ ೧೯೮೪–೮೫ರಲ್ಲಿ ಸುಮಾರು ನಾಲ್ವತ್ತು ಲಕ್ಷ ಅಂದರೆ ಒಟ್ಟು ಜನಸಂಖ್ಯೆಯ ಶೇಕಡಾ ಒಂದಕ್ಕಿಂತ ಕಡಿಮೆ. ಅಭಿವೃದ್ಧಿ ಹೊಂದಿದ ದೇಶಗಳಲ್ಲಾದರೆ ಇವರ ಪ್ರಮಾಣ ಶೇಕಡಾ ೫೦ಕ್ಕಿಂತ ಹೆಚ್ಚಿರುತ್ತದೆ. ಎರಡನೆಯದಾಗಿ ಭಾರತದ ಕಂಪನಿಗಳಲ್ಲಿ ಸರಕಾರಿ ಬಂಡವಾಳದ ಕಂಪನಿಗಳದೇ ಸಿಂಹಪಾಲು. ಆದರೆ ಕೆಲವೇ ಸಾರ್ವಜನಿಕ ಉದ್ದಿಮೆಗಳನ್ನು ಹೊರತುಪಡಿಸಿ ಉಳಿದಂತೆ ಎಲ್ಲ ಸರಕಾರಿ ಉದ್ದಿಮೆಗಳು ಬಿಳಿ ಆನೆಗಳಾದ್ದರಿಂದ

ಸರಕಾರ ಅವುಗಳಿಂದ ಹೆಚ್ಚು ಆದಾಯ ಪಡೆಯಲು ಶಕ್ಯ ವಾಗುವದಿಲ್ಲ. ಹೀಗಾಗಿ ಸಾರ್ವಜನಿಕರು ಉಪಯೋಗಿಸುವ ವಸ್ತುಗಳ ಮೇಲೆಯೇ ಹೆಚ್ಚು ಹೆಚ್ಚು ತೆರಿಗೆ ಹೇರಿ ಅಧಿಕ ಆದಾಯವನ್ನು ಸಂಗ್ರಹಿಸಲಾಗುತ್ತದೆ. ಇದು ಸಾಮಾನ್ಯ ಜನತೆಯ ಮೇಲೆ ಹೊರಲಾಗದ ಹೊರೆಯಾಗಿ ಪರಿಣಮಿಸು ವದು.

ಭಾರತೀಯ ತೆರಿಗೆಯಲ್ಲಿಯ ಮತ್ತೊಂದು ದೊಡ್ಡ ದೋಷ ಎಂದರೆ ತೆರಿಗೆ ವಿಧಿಸುವ ತತ್ವ ಆರ್ಥಿಕ ಪರಿಸ್ಥಿತಿಗಿಂತ ರಾಜಕೀಯ ಪ್ರೇರಿತವಾಗಿರುತ್ತದೆ. ರಾಜ್ಯಗಳಾಗಲಿ. ಕೇಂದ್ರ ವಾಗಲಿ ಚುನಾವಣೆ ನಡೆಯುವ ವರ್ಷದಲ್ಲಿಯ ಆಯವ್ಯಯ ಪಟ್ಟಿಯಲ್ಲಿ ಸಾಮಾನ್ಯವಾಗಿ ವಿಶೇಷ ತೆರಿಗೆ ಹೇರದೆ ನಾಗರಿಕರ ಸಹಾನುಭೂತಿ ಗಳಿಸುವ ಆಯವ್ಯಯವನ್ನು ಮಂಡಿಸುತ್ತವೆ. ಚುನಾವಣೆಯ ನಂತರದಲ್ಲಿ ಹೆಚ್ಚಿನ ತೆರಿಗೆ ಹೇರಿ ಹಣ ಸಂಗ್ರಹಿ ಸಲು ಪ್ರಯತ್ನಿಸುವವು. ಕೇಂದ್ರ ರಾಜ್ಯಗಳ ಚುನಾವಣೆ ಮತ್ತು ಆಯವ್ಯಯಗಳ ತುಲನಾತ್ಮಕ ಅಭ್ಯಾಸ ಮಾಡಿದವರಿಗೆ ಈ ವಿಷಯ ಮನದಟ್ಟಾಗುವದು ಖಂಡಿತ. ಈ ಪ್ರವೃತ್ತಿ ವಿದೇಶಗಳಲ್ಲಿಯೂ ಇರುವದಾದರೂ ಅಲ್ಲಿ ದೇಶದ ಆರ್ಥಿಕ ಸಮತೋಲನ ಕಾಯ್ದುಕೊಳ್ಳುವಲ್ಲಿಯೇ ಆಯವ್ಯಯಕ್ಕೆ ಹೆಚ್ಚಿನ ಒತ್ತು ಸಿಗುತ್ತದೆ.

## ೭. ಕಪ್ಪು ಹಣವೆಂದರೇನು ?

ತೆರಿಗೆ ಮತ್ತು ಕಪ್ಪು ಹಣ : ತೆರಿಗೆ ಮತ್ತು ಕಪ್ಪು ಹಣದ ಬಗ್ಗೆ ವಿಚಾರಿಸುವಾಗ 'ನೀ ಮಾಯೆಯೊಳಗೋ ನಿನ್ನೊಳು ಮಾಯೆಯೋ' ಎಂಬ ದಾಸರ ಹಾಡು ನೆನಪಿಗೆ ಬರುತ್ತದೆ. ತೆರಿಗೆ ಮತ್ತು ಕಪ್ಪು ಹಣದ ಸಂಬಂಧ ಪ್ರಶ್ನೆ ಬೀಜ ವೃಕ್ಷ ಪ್ರಶ್ನೆಯಂತೆ ಒಂದು ಒಗಟಾಗಿದೆ. ಕಪ್ಪು ಹಣದ ಬಗ್ಗೆ ಸಾಮಾನ್ಯನೂ ಕೂಡ ಮಾತನಾಡುವಷ್ಟರ ಮಟ್ಟಿಗೆ ಅದು ಸರ್ವೇ ಸಾಮಾನ್ಯವಾಗಿ ಬಿಟ್ಟಿದೆ. ಆದರೆ ಕಪ್ಪು ಹಣ ಎಂದರೇನು ? ಮತ್ತು ಅದರ ಹುಟ್ಟು ಹೇಗೆ ? ಎಂಬ ಬಗ್ಗೆ ಅನೇಕರಿಗೆ ತಿಳಿದಿರಲಿಕ್ಕಿಲ್ಲ. ತೆರಿಗೆ ಶಾಸ್ತ್ರದಲ್ಲಿ ಕಪ್ಪು ಹಣವೆಂದರೇನೆಂಬ ಬಗ್ಗೆ ವ್ಯಾಖ್ಯೆಗಳನ್ನು ಕೂಡ ಕೊಡಲಾಗಿದೆಯಾದರೂ ಅತ್ಯಂತ ಸರಳ ಭಾಷೆಯಲ್ಲಿ ಕಪ್ಪು ಹಣವನ್ನು 'ಕಾಯಿದೆ ಕಕ್ಷೆಗೆ ಒಳಪಡದ ಯಾವುದೇ ವ್ಯವಹಾರದಿಂದ ಗಳಿಸಿದ ಹಣ' ಎನ್ನಬಹುದು. ನಾಗರಿಕನು ತನ್ನ ದಿನನಿತ್ಯದ ಬದುಕಿನಲ್ಲಿ ಮಾಡುವ ಪ್ರತಿಯೊಂದು ವ್ಯವಹಾರವೂ ಒಂದು ಕಾಯಿದೆಯ ಕಕ್ಷೆಗೆ ಒಳಪಟ್ಟಿರುವದು. ಅಂತಹ ಕಾಯಿದೆ ಕಕ್ಷೆಯ ಹೊರಗೆ ಮಾಡಿದ ವ್ಯವಹಾರದಿಂದ ಗಳಿಸಿದ ಅಥವಾ ವ್ಯಯಿಸಿದ ಹಣ ಕಪ್ಪು ಹಣವೆಂದು ಕರೆಯಲ್ಪಡುತ್ತದೆ. ಕಪ್ಪು ಹಣ ಮತ್ತು ಅದರ ನಿರ್ಮೂಲನೆಯ ಬಗ್ಗೆ ನಾವೆಲ್ಲ ಉದ್ದುದ್ದ ಭಾಷಣ ಮಾಡುತ್ತೇವೆಯಲ್ಲದೆ, ಕಪ್ಪು ಹಣದ ನಿರ್ಮಾತೃಗಳನ್ನು ದೇಶದ್ರೋಹಿ

ಗಳೆಂದು ಗುಂಡಿಕ್ಕಿ ಕೊಲ್ಲಬೇಕೆನ್ನುವಷ್ಟರ ಮಟ್ಟಿಗೂ ನಾವು ಹೋಗುತ್ತೇವೆ. ಆದರೆ ಕಪ್ಪು ಹಣದ ದೃಷ್ಟಿಯಲ್ಲಿ ನಾವೆಲ್ಲ ಒಂದಲ್ಲ ಒಂದು ರೀತಿಯಿಂದ ಸಕ್ರಿಯ ಪಾತ್ರ ವಹಿಸುತ್ತಿದ್ದೇವೆ ಯೆಂದು ಹೇಳಿದರೆ ಓದುಗರು ಹುಬ್ಬೇರಿಸಬಹುದು. ಕಪ್ಪು ಹಣದ ಸೃಷ್ಟಿಯಲ್ಲಿ ನಮ್ಮ ನಿಮ್ಮ ಪಾತ್ರ ಎಷ್ಟೆಂಬು ದನ್ನು ಸ್ವಲ್ಪ ಪರೀಕ್ಷಿಸಿಕೊಳ್ಳೋಣ.

ನಾವು ಬಸ್ಸಿನಲ್ಲಿ ಪ್ರಯಾಣಿಸುವಾಗ ಕಂಡಕ್ಟರನಿಗೆ ಐವತ್ತು ಪೈಸೆ ಕೊಟ್ಟು ಟಿಕೇಟು ತೆಗೆದುಕೊಳ್ಳದೇ ಇಪ್ಪತ್ತೈದು ಪೈಸೆ ಉಳಿ ಸಿದೆವೆಂದು ಸಂತೋಷಪಡುತ್ತೇವೆ. ಖರೀದಿಸಿದ ವಸ್ತುವಿಗೆ ರಸೀದಿ ತೆಗೆದುಕೊಳ್ಳದೇ ಅಂಗಡಿಕಾರ ಕಡಿಮೆ ಬೆಲೆಗೆ ಮಾರಿದ ನೆಂದು ಖುಷಿಪಡುತ್ತೇವೆ. ನಾಲ್ಕು ರೂಪಾಯಿ ಟಿಕೇಟಿಗೆ ಥಿಯೇಟರಿನ ಹೊರಗೆ ಎಂಟು ರೂಪಾಯಿ ಕೊಟ್ಟು ಸಿನೀಮಾ ನೋಡಿ ಆನಂದಿಸುತ್ತೇವೆ. ಆದಾಯದ ಮೂಲಗಳನ್ನು ಮರೆ ಮಾಚಿ ಕಡಿಮೆ ಆದಾಯ ತೋರಿಸಿ ಆದಾಯಕರ ತಪ್ಪಿಸಿಕೊಳ್ಳು ತ್ತೇವೆ. ಪರದೇಶದ ವಸ್ತುವಿನ ಮೋಹದಿಂದ ಕಳ್ಳ ಪೇಟೆಯಲ್ಲಿ ಅದನ್ನೂ ಕೊಳ್ಳುತ್ತೇವೆ. ಹೀಗೆ ಕಪ್ಪು ಹಣದ ಕೆಡಕಿನ ಬಗ್ಗೆ ಮಾತನಾಡುವ ಸಂಭಾವಿತರೆನಿಸಿದ ನಾವು ಕಾಯಿದೆ ಕಕ್ಷೆಗೆ ಒಳಪಡದ ಇಂಥ ಅನೇಕ ವ್ಯವಹಾರಗಳಲ್ಲಿ ದಿನವೂ ತೊಡಗಿರು ತ್ತೇವೆ. ಇಂಥ ವ್ಯವಹಾರದಿಂದ ದೂರವಿದ್ದವರು ಯಾರು ಎಂಬುದನ್ನು ಆತ್ಮ ಪರೀಕ್ಷೆ ಮಾಡಿಕೊಳ್ಳುವದರೊಡನೆ ನಾವೆಷ್ಟು ಸಂಭಾವಿತರೆಂದು ಪರೀಕ್ಷಿಸಿಕೊಳ್ಳಬಹುದು.

ಕಪ್ಪು ಹಣ ಇಂದು ದೇಶದ ಪಿಡುಗಾಗಿ ಪರಿಣಮಿಸಿದೆ. ದೇಶದ ಆರ್ಥಿಕ ಸ್ವಾಸ್ಥ್ಯವನ್ನು ಕಾಯ್ದುಕೊಳ್ಳುವ ಸಲುವಾಗಿ ನಾಗರಿಕರ ಬೇಡಿಕೆ ಮತ್ತು ಪೂರೈಕೆಯನ್ನು ಕಾಯ್ದುಕೊಳ್ಳುವದು ಸರಕಾರದ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿದೆ. ಕಪ್ಪು ಹಣದ ನಿರ್ಮಾಣ ಮತ್ತು ಉಪಯೋಗದಿಂದ ಸರಕಾರಕ್ಕೆ ಬೇಡಿಕೆ ಮತ್ತು ಪೂರೈಕೆಯನ್ನು ಕಾಯ್ದುಕೊಳ್ಳುವದು ಅಸಾಧ್ಯವಾಗುವದು. ಕಪ್ಪು ಹಣದ ನಿರ್ಮಾಣದಿಂದ ಹಣದ ಸರಬರಾಜು ಹೆಚ್ಚಿ ಪೇಟೆಯಲ್ಲಿ ಬೆಲೆ ಏರು-ಪೇರು ಆಗುವದು. ಹಾಗಾಗಿ ಬಡವರು ಮತ್ತು ನಿಶ್ಚಿತ ಆದಾಯದ ಜನರ ಖರೀದಿಸುವ ಶಕ್ತಿ ಕಡಿಮೆಯಾಗುವದು. ಅದೂ ಅಲ್ಲದೆ ಅತಿಯಾಗಿ ಸಂಗ್ರಹವಾದ ಲೆಕ್ಕಕ್ಕೆ ಸಿಗದ ಹಣ ಮತ್ತೆ ಕಳ್ಳ ವ್ಯಾಪಾರಕ್ಕೆ ಪ್ರೇರೇಪಿಸಿ ಇನ್ನಿಷ್ಟು ಕಪ್ಪು ಹಣದ ಸೃಷ್ಟಿಗೆ ನಾಂದಿಯಾಗುತ್ತದೆ. ಇದು ಒಂದು ರೀತಿಯ ವಿಷಚಕ್ರ. ಈ ವಿಷಚಕ್ರದ ನಡುವೆ ಸಿಕ್ಕಿದ ಸಾಮಾನ್ಯ ಜನತೆ ಮತ್ತು ಸರಕಾರ ದುರ್ಬಲವಾಗುತ್ತವೆ. ಹಾಗಾಗಿ ಕಪ್ಪುಹಣದ ನಿರ್ಮೂಲನೆ ಮತ್ತು ನಿಯಂತ್ರಣ ದೇಶದ ಅಭಿವೃದ್ಧಿಯ ದೃಷ್ಟಿಯಿಂದ ಅತಿ ಮಹತ್ವವಾದದ್ದು.

ಕಪ್ಪು ಹಣದ ಸಂಗ್ರಹಣೆಯಲ್ಲಿ ತೆರಿಗೆಗಳ್ಳತನ ಬಹು ಮುಖ್ಯ ಪಾತ್ರವನ್ನು ವಹಿಸುತ್ತದೆ. ಒಬ್ಬರ ವಸ್ತುವನ್ನು ತೆಗೆದುಕೊಂಡರೆ ಹೇಗೆ ಕಳ್ಳತನವಾಗುತ್ತದೆಯೋ ಅದೇ ರೀತಿ ಸರಕಾರಕ್ಕೆ ಕೊಡಬೇಕಾದ ತೆರಿಗೆಯನ್ನು ಕೊಡದೇ ತಪ್ಪಿಸಿಕೊಂಡರೆ ಅದೂ ಕಳ್ಳತನವೆಂದೇ ಪರಿಗಣಿಸಲ್ಪಡುತ್ತದೆ. ಕಿಸೆ

ಗಳ್ಳರು ಅಥವಾ ಮನೆಗಳ್ಳರ ಬಗ್ಗೆ ನಮಗೆ ತುಚ್ಛೀಕಾರ
ಭಾವನೆ ಉಂಟಾದರೆ ದರೋಡೆಕೋರರ ಬಗ್ಗೆ ಭಯವುಂಟಾಗು
ತ್ತದೆ. ಈ ರೀತಿಯ ಕಳ್ಳರಿಗೆ ನ್ಯಾಯಾಲಯದಲ್ಲಿ ಶಿಕ್ಷೆಯಾಗಲಿ
ಅಥವಾ ಆಗದಿರಲಿ ಸಾಮಾನ್ಯ ಜನತೆಯ ದೃಷ್ಟಿಯಲ್ಲಿ ಅ
ಕೀಳಾಗುವವನಂತೂ ಖಚಿತ. ಆದರೆ ಈ ತೆರಿಗೆಗಳ್ಳ ಮಹಾ
ಶಯ ಮಾತ್ರ ಸಮಾಜದಲ್ಲಿ ಮನ್ನಣೆಯ ಮಣೆಯನ್ನು ಪಡ
ದಿರುತ್ತಾನೆ. ಮನೆ ಬಾಡಿಗೆ. ವಿದ್ಯುತ್ ಮತ್ತು ನೀರಿನ ಕ
ಕೊಡದ ಮಂತ್ರಿಗಳು ಮತ್ತು ಸಂಸತ್ ಸದಸ್ಯರು, ಕೋಟ್ಯಾಂತ
ರೂಪಾಯಿಗಳ ವಿದೇಶಿ ವಿನಿಮಯ ಕಳ್ಳತನ ಮಾಡಿ ಪರದೇಶ
ಬ್ಯಾಂಕುಗಳಲ್ಲಿ ಹಣ ಶೇಖರಿಸಿದ ಉದ್ಯೋಗಪತಿಗಳು, ಲಕ್ಷ
ಗಟ್ಟಲೆ ಲಂಚ ಪಡೆದು ಕೊಬ್ಬಿದ ಅಧಿಕಾರಿಗಳು, ಆರಂ
ಏಳಂಕೆಗಳ ಆದಾಯಕರ ತಪ್ಪಿಸುವ ಮಹಾನ್ ಸಿನೀಮಾ ತಾ
ಯರೆಲ್ಲ ಒಂದು ರೀತಿಯಲ್ಲಿ ಕಳ್ಳರೇ ಆದರೂ ಸಮಾಜ ಅವರನ್ನು
ಗೌರವದಿಂದ ಕಾಣುತ್ತದೆ. ಇದು ಸಮಾಜ ಒಂದು ರೀತಿಯಲ್ಲಿ
ಕಪ್ಪು ಹಣವನ್ನು ಹುಟ್ಟುಹಾಕಲು ಅವರಿಗೆ ಪ್ರೋತ್ಸಾ
ಕೊಟ್ಟಂತೆಯೇ ಸರಿ.

ಕಪ್ಪು ಹಣದ ಹಾವಳಿ ಭಾರತದ ಮಟ್ಟಿಗೆ ಮಾತ್
ಸೀಮಿತವಾಗಿರದೆ ಅದು ವಿಶ್ವವ್ಯಾಪಿಯಾಗಿದೆ. ಆದರೆ ಕಪ್
ಹಣದ ಪ್ರಭಾವ ಮತ್ತು ಅನಿಷ್ಟಗಳು ಮುಂದುವರಿದ ದೇಶ
ಗಳಿಗಿಂತ ಹಿಂದುಳಿದ ಮತ್ತು ಅಭಿವೃದ್ಧಿಪರ ದೇಶಗಳ
ಮೇಲೆಯೇ ಹೆಚ್ಚಿನ ಪ್ರಮಾಣದಲ್ಲಿ ಉಂಟಾಗುತ್ತವೆ. ಹಾಗಾ

ಕಪ್ಪು ಹಣದ ಸೃಷ್ಟಿಯ ಮೂಲವನ್ನು ಗುರುತಿಸಿ ಅದನ್ನು ನಿರ್ಮೂಲನ ಮಾಡುವದರಿಂದಲೇ ಕಪ್ಪು ಹಣವನ್ನು ಹತೋಟಿಯಲ್ಲಿಡಬೇಕಾಗುವದು. ತೆರಿಗೆಗಳ ತಸ ಮತ್ತು ತೆರಿಗೆ ತಪ್ಪಿಸುವಿಕೆಗೆ ಅವ್ಯವಸ್ಥಿತ ಮತ್ತು ಅತಿಯಾದ ತೆರಿಗೆ ಕಾರಣವೆಂದು ಪ್ರೊ. ಕಾಲ್ಡರರವರು ತಮ್ಮ ವರದಿಯಲ್ಲಿ ವಿವರಿಸಿದ್ದಾರೆ. ಆದಾಯದ ಮೇಲೆ ಅತಿಯಾದ ಕರ ವಿಧಿಸುವದರಿಂದ ತೆರಿಗೆದಾರ ಅದನ್ನು ತಪ್ಪಿಸಲು ಪ್ರಯತ್ನಿಸುತ್ತಾನೆ. ಭಾರತದಲ್ಲಿ ಅರವತ್ತರ ದಶಕದಲ್ಲಿ ತೆರಿಗೆ ಆದಾಯದ ಶೇಕಡಾ ೯೭ರಷ್ಟಿತ್ತು. ಹಾಗಾಗಿ ತೆರಿಗೆದಾರ ತೆರಿಗೆ ತಪ್ಪಿಸಿದ ಪ್ರತಿ ೧೦೦ರೂಪಾಯಿಯಲ್ಲಿ ಆತನಿಗೆ ೯೭ ರೂ. ಉಳಿತಾಯವಾಗುತ್ತಿತ್ತು. ತೆರಿಗೆ ಪ್ರಮಾಣ ಕಡಿಮೆಯಾದಂತೆ ಅವನಿಗೆ ತೆರಿಗೆ ತಪ್ಪಿಸುವದರಿಂದಾಗುವ ಲಾಭ ಕಡಿಮೆಯಾಗುವದರಿಂದ ತೆರಿಗೆ ತಪ್ಪಿಸುವ ಪ್ರವೃತ್ತಿ ಕಡಿಮೆಯಾಗುತ್ತದೆಯಲ್ಲದೆ ಸರಕಾರದ ಬೊಕ್ಕಸಕ್ಕೆ ಹೆಚ್ಚಿನ ಹಣವನ್ನು ತರುತ್ತದೆ. ಈ ಪ್ರವೃತ್ತಿಯ ಅನುಭವ ನಮ್ಮ ಇತ್ತೀಚಿನ ಆಯವ್ಯಯ ಪತ್ರಗಳಿಂದ ಸಾಬೀತಾಗಿದೆ. ತೆರಿಗೆ ಪದ್ಧತಿಯನ್ನು ಸರಳೀಕರಣಗೊಳಿಸಿ ತೆರಿಗೆ ಪ್ರಮಾಣವನ್ನು ಕಡಿಮೆ ಮಾಡಿರುವದರಿಂದ ೧೯೮೫–೮೬ರಲ್ಲಿ ತೆರಿಗೆ ಸಂಗ್ರಹ ಶೇಕಡಾ ೨೨ರಷ್ಟು ಹೆಚ್ಚಿದೆಯಲ್ಲದೇ ಹೆಚ್ಚು ಹೆಚ್ಚು ಜನರು ತೆರಿಗೆ ಕಕ್ಷೆಯೊಳಗೆ ಬರಲು ಸಾಧ್ಯವಾಗಿದೆ.

# ೮. ಕಪ್ಪು ಹಣದ ಹುಟ್ಟು ಮತ್ತು ಬೆಳವಣಿಗೆ

ತೆರಿಗೆ ತಪ್ಪಿಸುವಿಕೆ ಮತ್ತು ಕಪ್ಪು ಹಣದ ನಿರ್ಮೂಲನದ ಬಗ್ಗೆ ಸರಕಾರ ಕಾಲಕಾಲಕ್ಕೆ ನಿಯಮಿಸಿದ ಸಮಿತಿಗಳು ಮತ್ತು ಹಣಕಾಸು ಆಯೋಗಗಳೂ ಅಮೂಲ್ಯ ಸಲಹೆ ಸೂಚನೆಗಳನ್ನು ಇತ್ತಿವೆ. ಸರಕಾರ ಅವುಗಳಲ್ಲಿ ಅನೇಕ ಸೂಚನೆಗಳನ್ನು ಅನುಷ್ಠಾನದಲ್ಲಿ ಕೂಡ ತಂದಿದೆ. ಆದರೆ ಅವುಗಳಿಂದ ದೊರೆತ ಫಲ ಮಾತ್ರ ಸಂತೋಷಜನಕವಾಗಿಲ್ಲ. ನೆಹರೂರವರ ಆಡಳಿತ ಕಾಲದಲ್ಲಿ ಭಾರತದ ತೆರಿಗೆ ಪದ್ಧತಿ ಸುಧಾರಣೆ ಕುರಿತು ಕೆಂಬ್ರಿಜ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಪ್ರೊ. ಕಾಲ್ಡಾರರ ನೇತೃತ್ವದಲ್ಲಿ ನೇಮಿಸಿದ ಸಮಿತಿ ೧೯೫೬ರಲ್ಲಿ ತನ್ನ ವರದಿ ಸಲ್ಲಿಸಿತು. ಈ ವರದಿ ಭಾರತದ ತೆರಿಗೆ ಪದ್ಧತಿಯಲ್ಲಿಯ ನ್ಯೂನತೆಗಳನ್ನು ವಿವರವಾಗಿ ವಿಶ್ಲೇಶಿಸಿ ಅವರ ನಿವಾರಣೆಗೆ ಅತ್ಯಮೂಲ್ಯ ಸಲಹೆಯನ್ನು ನೀಡಿದೆ. ಈ ವರದಿಯಲ್ಲದೇ ೧೯೬೮ರಲ್ಲಿ ತೆರಿಗೆ ಸರಳೀಕರಣದ ಕುರಿತು ನೇಮಿಸಿದ ಭೂತಲಿಂಗಮ ಸಮಿತಿಯ ವರದಿ ಹಾಗೂ ೧೯೭೦ರಲ್ಲಿ ತೆರಿಗೆಗಳ್ಳತನ ಮತ್ತು ತೆರಿಗೆ ತಪ್ಪಿಸುವದನ್ನು ಕುರಿತು ಅಭ್ಯಸಿಸಲು ನೇಮಿಸಿದ ನ್ಯಾಯಮೂರ್ತಿ ವಾಂಛೂ ಸಮಿತಿಯ ವರದಿ. ಅಪ್ರತ್ಯಕ್ಷ ತೆರಿಗೆ ಸುಧಾರಣೆ ಮತ್ತು ನಿರ್ವಹಣೆ ಕುರಿತು ನೇಮಿಸಿದ ಎಲ್. ಕೇ. ಝಾ ಸಮಿತಿಯ ವರದಿ ಹಾಗೂ ಇನ್ನೂ ಅನೇಕ ಖಾಸಗಿ ಮತ್ತು ಸಾರ್ವಜನಿಕ ಸಂಸ್ಥೆಗಳು ಸಲ್ಲಿಸಿದ ವರದಿಗಳು ಭಾರತದಲ್ಲಿ

ಕಪ್ಪು ಹಣಕ್ಕೆ ಕಾರಣವಾದ ಅಂಶಗಳು ಮತ್ತು ಅದರ ಪ್ರಮಾಣದ ಬಗ್ಗೆ ಸಾಕಷ್ಟು ಬೆಳಕು ಚೆಲ್ಲಿದೆಯಾದರೂ ಅವುಗಳ ಉದ್ದೇಶ ಮಾತ್ರ ಆಕಾಶದಲ್ಲಿಯ ನಕ್ಷತ್ರಗಳನ್ನು ಎಣಿಸಿದಷ್ಟೇ ಯಶಸ್ವಿಯಾಗಿದೆ ಎನ್ನಬಹುದು.

ಸ್ವಾತಂತ್ರ್ಯದ ನಂತರದಲ್ಲಿ ಪ್ರಕಾಶನಗೊಳಿಸಲ್ಪಟ್ಟ ಎಲ್ಲ ವರದಿಗಳಲ್ಲಿ ರಾಷ್ಟ್ರೀಯ ಹಣಕಾಸು ಮತ್ತು ನೀತಿ ನಿರ್ವಹಣೆ ಸಂಸ್ಥೆಯ (National Institute of Public Finance and Policy) ಅಧ್ಯಕ್ಷರಾದ ಡಾ॥ ಚೆಲ್ಲಯ್ಯನವರ ನೇತೃತ್ವದಲ್ಲಿ ನಿಯಮಿಸಲ್ಪಟ್ಟ ಸಮಿತಿ ನೀಡಿದ ವರದಿ ಮಾತ್ರ ಕಪ್ಪು ಹಣದ ಸಮಗ್ರ ಮುಖಗಳ ಮೇಲೆ ಕ್ಷ ಕಿರಣ ಬೀರಬಲ್ಲ ವರದಿ ಎನ್ನಬಹುದು. ೧೯೮೫ರ ಜೂನ ತಿಂಗಳಲ್ಲಿ ಆರುನೂರ ಎರಡು ಪುಟಗಳ ಈ ಬೃಹತ್ ವರದಿಯನ್ನು ಬಿಡುಗಡೆಮಾಡುತ್ತ ಆಗಿನ ಕೇಂದ್ರದ ಹಣಕಾಸು ಸಚಿವ ವಿ. ಪಿ. ಸಿಂಗರವರು, ಇಂಥ ಸಮಗ್ರ ವರದಿಯ ಅನುಷ್ಠಾನದಿಂದ ಭಾರತದಲ್ಲಿಯ ಕಪ್ಪು ಹಣದ ನಿರ್ಮಾಣವನ್ನು ಯಶಸ್ವಿಯಯಾಗಿ ತಡೆಗಟ್ಟಬಹುದೆಂಬ ವಿಶ್ವಾಸವನ್ನು ವ್ಯಕ್ತಪಡಿಸಿದರು. ಡಾ॥ ಚೆಲ್ಲಯ್ಯ ಸಮಿತಿಯ ವರದಿಯು. ನ್ಯಾಯಮೂರ್ತಿ ವಾಂಛೂರವರು ಕಪ್ಪು ಹಣದ ನಿರ್ಮಾಣದ ಬಗ್ಗೆ ಹೊರಗೆಡಹಿದ ವಿಷಯಗಳಲ್ಲದೇ ಇನ್ನೂ ಅನೇಕ ಹೊಸ ಮೂಲಗಳನ್ನು ಪರಿಚಯಿಸಿರುವರು. ನಾವು ಸಾಮಾನ್ಯವಾಗಿ ಕಪ್ಪು ಹಣ ಮತ್ತು ಕಪ್ಪು ಸಂಪತ್ತಿನಲ್ಲಿ ಯಾವುದೇ ಅಂತರವನ್ನು ಕಾಣುವದಿಲ್ಲ. ಆದರೆ ಈ ವರದಿ ಲೆಕ್ಕವಿಡದ ನೋಟುಗಳು ಮತ್ತು ಬ್ಯಾಂಕಿನಲ್ಲಿ ಇಟ್ಟಿರುವ ಹಣವಾಗಿ ಪರಿವರ್ತಿಸಬಲ್ಲ

ವಸ್ತುಗಳನ್ನು ಕಪ್ಪು ಸಂಪತ್ತು ಎಂದು, ತೆರಿಗೆ ಯೋಗ್ಯವಾದ
ಮೊತ್ತದಲ್ಲಿ ತೆರಿಗೆ ತಪ್ಪಿಸಿದ ಹಣವನ್ನು ಕಪ್ಪು ಆದಾಯ ಎಂದು
ವಿವರಿಸಿದೆ.

ಪ್ರೊ. ಕಾಲ್ಡರವರ ಪ್ರಕಾರ ೧೯೫೦ರಲ್ಲಿ ೨೦೦ ರಿಂದ
೩೦೦ ಕೋಟಿ ರೂಪಾಯಿಗಳಷ್ಟು ಕಪ್ಪು ಹಣವಿತ್ತು. ನ್ಯಾಯ
ಮೂರ್ತಿ ವಾಂಛೂ ವರದಿಯ ಪ್ರಕಾರ ೧೯೬೮–೬೯ರಲ್ಲಿ
೧೪೦೦ ಕೋಟಿ ರೂಪಾಯಿ ಕಪ್ಪು ಹಣ ಸೃಷ್ಟಿಯಾಗಿದೆ
ಎಂದು ಅಂದಾಜು ಮಾಡಲಾಗಿತ್ತು. ಡಾ॥ ಚೆಲ್ಲಯ್ಯ ವರದಿ
ಇನ್ನೂ ಮುಂದೆ ಹೋಗಿ ೧೯೭೫–೭೬ರಲ್ಲಿ ೯೯೫೮ ಕೋಟಿ
ಯಿಂದ ೧೧೮೭೦ ಕೋಟಿಯಷ್ಟಿದ್ದ ಕಪ್ಪು ಹಣದ ಸಂಗ್ರಹ
೧೯೮೩–೮೪ರಲ್ಲಿ ಸುಮಾರು ೩೭.೦೦೦ ಕೋಟಿ ರೂಪಾಯಿಗಳಿಗೆ
ಏರಿದೆ ಎಂದೂ, ಇದು ರಾಷ್ಟ್ರೀಯ ಒಟ್ಟು ಆದಾಯದ ಶೇಕಡಾ
೧೮ ರಿಂದ ೨೧ರಷ್ಟು ಆಗುವದೆಂದೂ ಹೇಳಿದೆ. ಅಂತಾರಾಷ್ಟ್ರೀಯ
ಹಣಕಾಸು ಸಂಸ್ಥೆ (IMF) ತಯಾರಿಸಿದ ಒಂದು ವರದಿಯ
ಪ್ರಕಾರ ಕಪ್ಪು ಹಣದ ಸಂಗ್ರಹ ಜಗತ್ತಿನ ಎಲ್ಲ ದೇಶಗಳಿಗಿಂತ
ಭಾರತದಲ್ಲಿ ಅತ್ಯಂತ ಹೆಚ್ಚೆಂದೂ ಮತ್ತು ಅದು ದೇಶದ
ಒಟ್ಟು ಉತ್ಪನ್ನದ ಶೇಕಡಾ ೫೦ಕ್ಕಿಂತ ಸ್ವಲ್ಪ ಕಡಿಮೆ ಇರಬಹು
ದೆಂದೂ ತಿಳಿಸಿದೆ.

ಡಾ॥ ಚೆಲ್ಲಯ್ಯ ವರದಿ ಕಪ್ಪು ಹಣದ ಲೆಕ್ಕ ಹಾಕುವಾಗ
ಒಕ್ಕಲುತನದ ಆದಾಯ ಮುಂತಾದ ತೆರಿಗೆಗೆ ಸಿಗದ ಉತ್ಪನ್ನ
ಮತ್ತು ಕಳ್ಳ ವ್ಯಾಪಾರದಿಂದ ಗಳಿಸಿರಬಹುದಾದ ಉತ್ಪನ್ನವನ್ನು
ಲೆಕ್ಕಕ್ಕೆ ತೆಗೆದುಕೊಂಡಿಲ್ಲ. ರೋಗಿಯ ವ್ಯಾಧಿಯ ಉಲ್ಬಣ

ಚಿಂತೆ ರೋಗದ ಬಗ್ಗೆ ಜ್ಞಾನವಿಲ್ಲದ ರೋಗಿಗಿಂತ ಅವನನ್ನು ಉಪಚರಿಸುತ್ತಿರುವ ವೈದ್ಯರಿಗೆ ಹೆಚ್ಚಿರುವಂತೆ ಸಾಮಾನ್ಯ ಅರ್ಥಶಾಸ್ತ್ರದ ಜ್ಞಾನವಿರುವವರಿಗೆ ಕಪ್ಪು ಹಣದ ಕುರಿತಾದ ಈ ಅಂಕೆ–ಸಂಖ್ಯೆಗಳನ್ನು ನೋಡಿದಾಗ ದಿಗಿಲಾಗುವದು ಸಹಜ. ಇನ್ನು ಕೆಲವು ವರದಿಗಳು ಭಾರತದಲ್ಲಿ ಚಲಾವಣೆಯಲ್ಲಿರುವ ಕಪ್ಪು ಹಣದ ಮೊತ್ತ ಸುಮಾರು ಎಂಬತ್ತು ಸಾವಿರ ಕೋಟಿ ರೂಪಾಯಿ ಮೀರಬಹುದೆಂದು ತಿಳಿಸುತ್ತವೆ. ಮತ್ತೊಂದು ಅಂದಾಜಿನ ಪ್ರಕಾರ ಕಪ್ಪು ಹಣ ಭಾರತದಲ್ಲಿ ಕಾಯಿದೆ ಬದ್ಧವಾಗಿ ಚಲಾವಣೆಯಲ್ಲಿರುವ ಹಣದೊಡನೆ ಸರಿಸಮಾನವಾಗಿ ಅಧಿಕಾರ ನಡೆಸುತ್ತಿದೆ ಎಂದು ಹೇಳಲಾಗಿದೆ. ಈಗಾಗಲೇ ಉದಾಹರಿಸಿದಂತೆ ಭಾರತದಲ್ಲಿರುವ ಕಪ್ಪು ಹಣದ ಮೊತ್ತವನ್ನು ಅಳೆಯುವ ಸಾಹಸ ಆಕಾಶದಲ್ಲಿರುವ ನಕ್ಷತ್ರಗಳನ್ನು ಎಣಿಸುವಷ್ಟೇ ಕಷ್ಟವಾದರೂ ಎಲ್ಲ ವರದಿಗಳೂ ಅದರ ಅನಾಹುತದ ಬಗ್ಗೆ ಬೆಳಕು ಚೆಲ್ಲುವಂತವುಗಳಾಗಿವೆ ಎಂಬ ಬಗ್ಗೆ ಎರಡು ಮಾತಿಲ್ಲ.

ಡಾ॥ ಚೆಲ್ಲಯ್ಯ ವರದಿ ಪ್ರಕಾರ ಬೃಹತ್ ಪ್ರಮಾಣದ ಕಪ್ಪುಹಣದ ನಿರ್ಮಾಣಕ್ಕೆ ಸದ್ಯ ಜಾರಿಯಲ್ಲಿರುವ ದೋಷಯುಕ್ತ ಕರಾಕರಣೆಯ ಪದ್ಧತಿ, ಅಸಂಖ್ಯ ನಿಯಂತ್ರಣ ಸಾರ್ವಜನಿಕ ಕ್ಷೇತ್ರ ಹಾಗೂ ಸರಕಾರಿ ವೆಚ್ಚದಲ್ಲಿ ಅಪರಿಮಿತ ಹೆಚ್ಚಳ, ರಾಜಕೀಯ ಪಕ್ಷಗಳ ನಿಧಿಗೆ ವಂತಿಗೆ ಕೊಡುವದು. ಅಶಕ್ತ ಮೇಲ್ವಿಚಾರಣ ವ್ಯವಸ್ಥೆ ಮತ್ತು ಎಲ್ಲಕ್ಕಿಂತ ಮಿಗಿಲಾಗಿ ಕ್ಷೀಣಿಸುತ್ತಿರುವ ಮಾನವಿಕ ಮೌಲ್ಯಗಳು ಎಂದು ತಿಳಿಸಿದೆ.

ಈ ಮೇಲೆ ವಿವರಿಸಿದ ವಿಷಯಗಳಲ್ಲದೆ ಆಸ್ತಿ ವ್ಯವಹಾರ, ದೊಡ್ಡ ಪ್ರಮಾಣದ ಉತ್ಪಾದನೆ, ಸಿನೀಮಾ ಉದ್ದಿಮೆಗಳು, ಕಪ್ಪು ವ್ಯಾಪಾರ, ಅಧಿಕ ಆದಾಯದ ವೃತ್ತಿನಿರತರು ಮತ್ತು ಕಟ್ಟಡ ನಿರ್ಮಾಣದ ಕೆಲಸ ಇವು ಕಪ್ಪು ಹಣದ ಹುಟ್ಟು ಹಾಕುವಲ್ಲಿ ಸೇರಿಕೊಂಡ ಹೊಸ ಮೂಲಗಳಾಗಿವೆ. ಡಾ॥ ಚೆಲ್ಲಯ್ಯ ವರದಿಯ ಬಗ್ಗೆ ಚರ್ಚಿಸುವ ಸಲುವಾಗಿ ೧೯೮೫ ಆಗಸ್ಟ ತಿಂಗಳಲ್ಲಿ ಮುಂಬಯಿಯ ಭಾರತೀಯ ವ್ಯಾಪಾರಿಗಳ ಸಂಘ (Indian Merchants Chamberin Bombay) ಒಂದು ವಿಚಾರಗೋಷ್ಠಿಯನ್ನು ಏರ್ಪಡಿಸಿತ್ತು. ಸ್ವತಃ ಚೆಲ್ಲಯ್ಯನವರೇ ಈ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರಲ್ಲದೇ, ಭಾರತದ ಪ್ರಸಿದ್ಧ ನ್ಯಾಯವಾದಿ, ಸಂವಿಧಾನ ತಜ್ಞ ಮತ್ತು ತೆರಿಗೆ ಸಲಹೆಗಾರರಾದ ನಾನಿ ಪಾಲ್ಕಿವಾಲರವರು ಈ ವಿಚಾರ ಗೋಷ್ಠಿಯನ್ನು ಉದ್ಘಾಟಿಸಿದರು. ಈ ಮಹನೀಯರಲ್ಲದೆ ದೇಶದ ನಾಡಿ ಬಡಿತವನ್ನು ಸ್ಪಂದಿಸಬಲ್ಲ ಕಾಮರ್ಸ ಪತ್ರಿಕೆಯ ಸಂಪಾದಕ ವಾಡಿಲಾಲ ಡಗ್ಲಿ, ಸರ್ವೋಚ್ಚ ನ್ಯಾಯಾಲಯದ ಮಾಜಿ ನ್ಯಾಯಮೂರ್ತಿ ಎಚ್. ಆರ್. ಖನ್ನಾ, ಶಾಸಕಿ ಹಾಗೂ ಮುಂಬಯಿಯ ಸಮಾಜ ಕಾರ್ಯಕರ್ತೆ ಶ್ರೀಮತಿ ಮೃಣಾಲಿನಿ ಗೋರೆ ಮುಂತಾದ ವಿದ್ವಾಂಸರು ಭಾಗವಹಿಸಿದ್ದರು. ಈ ವಿಚಾರ ಗೋಷ್ಠಿಯಿಂದ ಹೊರಬಂದ ಅಂಶಗಳೆಲ್ಲವೂ ಕಪ್ಪು ಹಣದ ಹುಟ್ಟಿನ ಬೇರನ್ನೇ ಶೋಧಿಸುವಲ್ಲಿ ಯಶಸ್ವಿಯಾಗಿವೆಯಲ್ಲದೆ ಭಾರತೀಯ ರಾಜಕಾರಣಿಗಳ ಕಣ್ಣು ತೆರೆಯಿಸುವಂತಹದೂ ಆಗಿದೆ ಎನ್ನಬಹುದು.

ನಾನಿ ಪಾಲ್ಕಿವಾಲಾರವರು ಕಪ್ಪು ಹಣದ ಸೃಷ್ಟಿಯ ಕಾರಣಗಳನ್ನು ತಮ್ಮದೇ ಆದ ಸರಳ ಸುಂದರ ಭಾಷೆಯಲ್ಲಿ

ವಿವರಿಸುತ್ತ ಕಪ್ಪು ಹಣದ ಸೃಷ್ಟಿಗೆ ಮುಖ್ಯವಾಗಿ ನಾಲ್ಕು ಹಸಿವೆ ಗಳು ಕಾರಣವೆಂದು ತಿಳಿಸಿದರು. ಅವು ಯಾವವೆಂದರೆ ರಾಜ ಕಾರಣಿಗಳ ಸಮಾಜೀಕರಣದ ಹಸಿವು, ರಾಜಕೀಯ ಪಕ್ಷಗಳ ವಂತಿಗೆಯ ಹಸಿವು, ಬ್ಯೂರೊಕ್ರಾಟರ ಅಧಿಕಾರದ ಹಸಿವು ಮತ್ತು ನಾಗರಿಕರ ಲೆಕ್ಕವಿಡದ ಹಣಗಳಿಸುವ ಹಸಿವು. ಸ್ವಲ್ಪ ದರಲ್ಲಿ ಹೇಳುವದಾದರೆ ಇಡೀ ದೇಶದ ಜನತೆ ಕಪ್ಪು ಹಣದ ನಿರ್ಮಾಣದಲ್ಲಿ ತೊಡಗಿದೆ ಎಂದು ಹೇಳಿದರು. ಮೇಲ್ನೋಟಕ್ಕೆ ಅತ್ಯಂತ ಸರಳವಾಗಿ ಕಾಣುವ ಈ ವಿಷಯದ ಬಗ್ಗೆ ಸ್ವಲ್ಪ ವಿಚಾರಿಸಿದರೆ ಕಪ್ಪು ಹಣದ ಸೃಷ್ಟಿ ಎಷ್ಟು ತ್ವರಿತ ಗತಿಯಿಂದ ಆಗುತ್ತದೆ ಎಂಬ ಬಗ್ಗೆ ನಮಗೆ ಅರಿವಾಗುವದಲ್ಲದೆ ಅದ ರಿಂದಾಗುವ ಪರಿಣಾಮವನ್ನು ಯೋಚಿಸಿದಾಗ ಭಾರತದ ಭವಿಷ್ಯದ ಬಗ್ಗೆ ಚಿಂತೆಯಾಗುತ್ತದೆ. ಭಾರತದ ಸಂವಿಧಾನವು ಸಮಾಜವಾದಿ ಸಮಾಜ ನಿರ್ಮಾಣವನ್ನು ಒಪ್ಪಿಕೊಂಡದ್ದರಿಂದ ರಾಜಕಾರಣಿಗಳಿಗೆ ರಾಜಕೀಯದಲ್ಲಿ ಶಾಶ್ವತವಾಗಿ ಇರಲು ಸಮಾಜೀಕರಣ ಮತ್ತು ಬಡವರ ಉದ್ಧಾರವೇ ಚುನಾವಣೆ ಗೆಲ್ಲುವ ಅಸ್ತ್ರವಾಗಿ ಪರಿಣಮಿಸಿದೆ. ಅದರ ಪರಿಣಾಮವಾಗಿ ದೇಶದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕ ಮತ್ತು ಉದ್ಯೋಗ ರಂಗದಲ್ಲಿ ಸರಕಾರ ಹೆಚ್ಚು ಹೆಚ್ಚಿನ ಪ್ರಮಾಣದಲ್ಲಿ ಭಾಗವಹಿಸು ತ್ತಿರುವುದರಿಂದ ಸಾರ್ವಜನಿಕ ವೆಚ್ಚ ದಿನೇ ದಿನೇ ಹೆಚ್ಚುತ್ತಿದೆ ಯಲ್ಲದೆ ಖಾಸಗಿ ಬಂಡವಾಳ ಹೂಡುವ ಪ್ರಮಾಣ ಕಡಿಮೆ ಯಾಗುತ್ತಿದೆ. ಇದರ ಜೊತೆಗೆ ಸರಕಾರದ ಆಡಳಿತದಲ್ಲಿ ಆಗುವ ವೆಚ್ಚವೂ ವಿಪರೀತವಾಗುತ್ತಿದೆ. ಸರಕಾರದಿಂದ ಮಾಡಲ್ಪಟ್ಟ ಕೆಲಸಗಳೆಲ್ಲ ಕಳಪೆಮಟ್ಟದ್ದೆಂಬ ವಿಷಯ ಗೌಪ್ಯವಾಗಿ ಉಳಿದಿಲ್ಲ.

ಸಾಮಾನ್ಯ ನಾಗರಿಕನೂ ಕೂಡ ಟೀಕಿಸುವಷ್ಟರ ಮಟ್ಟಿಗೆ ಅದು ಸಾರ್ವಜನಿಕವಾಗಿದೆ. ಕೆಲಸದ ನಿರ್ವಹಣೆಯಲ್ಲಿ ಅಲಕ್ಷ್ಯ, ಕಳಪೆ ಮಟ್ಟದ ವಸ್ತುಗಳ ಬಳಕೆ ಮತ್ತು ರಾಜಕೀಯ ಹಸ್ತಕ್ಷೇಪ ಇವು ಅದಕ್ಕೆ ಮುಖ್ಯ ಕಾರಣಗಳಾಗಿವೆ. ವಾಡಿಲಾಲ ಡಗ್ಲಿ ಯವರು ಸರಕಾರವೇ ಕಪ್ಪು ಹಣದ ನಿರ್ಮಾಣದಲ್ಲಿ ಪ್ರಮುಖ ಪಾತ್ರ ವಹಿಸುತ್ತಿದೆ ಎಂದು ಹೇಳಿದ್ದಾರೆ. ೧೯೮೫ಕ್ಕೆ ಪೂರ್ಣ ಗೊಂಡ ಆರನೇ ಯೋಜನೆಯಲ್ಲಿ ಅಭಿವೃದ್ಧಿಗಾಗಿ ಖರ್ಚು ಮಾಡಿದ ಒಟ್ಟು ಹಣ ಮೊತ್ತ ಸುಮಾರು ೧,೬೧,೦೦೦ ಕೋಟಿ ರೂಪಾಯಿಗಳು. ಈ ಹಣದಲ್ಲಿ ಸುಮಾರು ಶೇಕಡಾ ೩೫ ರಷ್ಟು ಅಭಿವೃದ್ಧಿಗೆ ವೆಚ್ಚವಾಗದೇ ಸೋರಿಹೋಗುತ್ತಿದೆ ಎಂದು ಅಂದಾಜು. ಈ ಸೋರುವಿಕೆಯ ಪ್ರಮಾಣ ಶೇಕಡಾ ೧೦ರಷ್ಟು ಎಂದು ಲೆಕ್ಕ ಮಾಡಿದರೂ ಆರನೇ ಯೋಜನೆಯ ಅಂತ್ಯದಲ್ಲಿ ಸರಕಾರದ ಸಹಾಯದಿಂದ ನಿರ್ಮಾಣವಾದ ಕಪ್ಪು ಹಣದ ಮೊತ್ತ ಸುಮಾರು ೧೬,೦೦೦ ಕೋಟಿ ರೂಪಾಯಿಗಳಾಗುವದು. ಇದು ಅತ್ಯಂತ ದೊಡ್ಡ ಮೊತ್ತವೆಂದು ಕಂಡರೂ ಅದರಲ್ಲಿ ಯಾವ ಅತಿಶಯೋಕ್ತಿಯೂ ಇಲ್ಲವೆಂದು ಹೇಳಬಹುದು. ಅಭಿವೃದ್ಧಿ ವೆಚ್ಚದ ಜೊತೆಗೇ ಸರಕಾರೀ ವೆಚ್ಚವು ಕೂಡ ಅಪರಿಮಿತ ಪ್ರಮಾಣದಲ್ಲಿ ಹೆಚ್ಚಿದೆ. ಉದಾಹರಣೆಗೆ ೧೯೫೦ ರಿಂದ ೧೯೮೫ರ ಅವಧಿಯಲ್ಲಿ ಸರಕಾರೀ ವೆಚ್ಚ ಐವತ್ತು ಪಟ್ಟು ಹೆಚ್ಚಿದೆಯಲ್ಲದೆ ಅದರ ಪ್ರಮಾಣ ದೇಶದ ಒಟ್ಟು ಉತ್ಪಾದ ನೆಯ ಶೇಕಡಾ ೯ ರಿಂದ ಶೇಕಡಾ ೨೭ಕ್ಕೆ ಹೆಚ್ಚಿದೆ. ಅಂದರೆ ಅನುತ್ಪಾದಕ ವೆಚ್ಚ ದೇಶದ ಒಟ್ಟು ಉತ್ಪಾದನೆಯ ಶೇಕಡಾ ೨೭ರಷ್ಟು ಎಂದೇ ಅರ್ಥ. ವೆಚ್ಚ ಹೆಚ್ಚಾದಂತೆ ಅದರ ಮೇಲಿನ

ಪತ್ತೋಟಿ ಕೂಡ ಹೆಚ್ಚಾಗಬೇಕಾಗುವದು. ಆದರೆ ಪ್ರಸ್ತುತ ಪ್ರಚಲಿತವಿರುವ ತಪಾಸಣೆಯ ಪದ್ಧತಿ ಓಬಿರಾಯನ ಕಾಲದ ಮಾದರಿಯದಾಗಿರುವದರಿಂದ ಕಾಯಿದೆಯೆಂಬ ಕತ್ತರಿಯ ಸಹಾಯದಿಂದ ಎಷ್ಟೇ ಹಣವನ್ನು ಸ್ವಾಹಮಾಡಿದರೂ ತಪ್ಪಿಸಿಕೊಳ್ಳಲು ಸುಲಭವಾಗಿದೆ. ಇದರ ಜೊತೆಗೆ ರಾಜಕೀಯ ಪಕ್ಷಗಳಿಗೆ ವಂತಿಗೆ ಸ್ವೀಕರಿಸುವ ಪದ್ಧತಿ ದೇಶದ ಮಹಾಪಿಡುಗಾಗಿ ಪರಿಣಮಿಸಿ ಕಪ್ಪುಹಣದ ಸಾಗರಕ್ಕೆ ಇನ್ನೊಂದು ಮಹಾ ಪ್ರವಾಹವಾಗಿ ಸೇರುತ್ತದೆ.

ಭಾರತದಂತಹ ವಿಶಾಲ ದೇಶದಲ್ಲಿ ಅಶಿಕ್ಷಿತ ಜನತೆಯೇ ಅಧಿಕ ಇರುವದರಿಂದ ಚುನಾವಣೆಯಲ್ಲಿ ಮತವನ್ನು ದೊಡ್ಡ ಪ್ರಮಾಣದಲ್ಲಿ ಹಣ, ಹೆಂಡದ ಹೊಳೆ ಹರಿಸಿ ಖರೀದಿಸಲಾಗುತ್ತದೆ ಎಂಬುದು ಎಲ್ಲರಿಗೂ ತಿಳಿದ ವಿಷಯ. ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ಹಣ ವೆಚ್ಚ ಮಾಡಬೇಕಾದರೆ ಎಲ್ಲ ರಾಜಕೀಯ ಪಕ್ಷಗಳೂ ಉದ್ದಿಮೆದಾರರ, ಕಂಟ್ರಾಕ್ಟರುಗಳ, ಕಳ್ಳಸಂತೆಕೋರರ ಮತ್ತು ಪ್ರಮುಖ ಅಧಿಕಾರಿಗಳ ಮೇಲೆಯೇ ಅವಲಂಬಿಸಬೇಕಾಗುತ್ತದೆ. ಹೀಗೆ ರಾಜಕೀಯ ಪಕ್ಷಗಳಿಗೆ ವಂತಿಗೆಯಾಗಿ ಕೊಟ್ಟ ಹಣಕ್ಕೆ ಲೆಕ್ಕವಿಡಲು ಸಾಧ್ಯವಿಲ್ಲ. ಅದೂ ಅಲ್ಲದೆ ಪ್ರಚಲಿತವಿರುವ ಕಾಯಿದೆಗಳೂ ಕೂಡ ಅದಕ್ಕೆ ಪೂರಕವಾಗಿರುವದರಿಂದ ಕೋಟಿಗಟ್ಟಲೆ ಲೆಕ್ಕವಿಡದ ಹಣ ಚುನಾವಣೆಗೆ ವ್ಯಯವಾಗುತ್ತದೆ. ರಾಜಕೀಯ ಪಕ್ಷಗಳಿಗೆ ದಾನ ನೀಡುವ ದಾನಿಗಳು ಯಾವ ಪಕ್ಷದವರನ್ನೂ ಎದುರು ಹಾಕಿಕೊಳ್ಳಲು ಇಚ್ಛಿಸುವದಿಲ್ಲವಾದ್ದರಿಂದ ಎಲ್ಲ ಪಕ್ಷಗಳಿಗೂ ವಂತಿಗೆ ಸಲ್ಲಿಸ

ಬೇಕಾಗುವದು. ಕಾಯಿದೆಬದ್ಧವಾಗಿ ಹಣ ಕೊಡಲು ಅನೇಕ ಅಡೆತಡೆಗಳಿರುವದರಿಂದ ಕಪ್ಪು ಹಣದ ರೂಪದಲ್ಲಿಯೇ ಕೊಡ ಬೇಕಾಗುವದು. ಇಲ್ಲಿಯೂ ಕೂಡ ಸರಕಾರದ ಪ್ರೋತ್ಸಾಹ ಮತ್ತು ಆಶೀರ್ವಾದದಿಂದಲೇ ಕಪ್ಪು ಹಣದ ನಿರ್ಮಾಣ ಆಗುತ್ತದೆ. ಸಿನೀಮಾ ಉದ್ದಿಮೆ ಮತ್ತು ಕಟ್ಟಡ ನಿರ್ಮಾಣ ಸಂಸ್ಥೆಗಳು ಕಪ್ಪು ಹಣ ಹುಟ್ಟು ಹಾಕುವಲ್ಲಿ ತಮ್ಮ ಪಾಲನ್ನು ಗಣನೀಯವಾಗಿ ಸಲ್ಲಿಸುತ್ತವೆ. ಉಚ್ಚ ಶ್ರೇಯಾಂಕಿತ ತಾರೆಯರು, ನಿರ್ದೇಶಕರು ಮುಂತಾದವರು ಕೋಟಿಗಟ್ಟಲೆ ಸಂಭಾವನೆಯನ್ನು ಪಡೆಯುತ್ತಾರೆ ಎಂಬ ವಿಷಯ ಎಲ್ಲರಿಗೂ ತಿಳಿದದ್ದೇ ಆದರೆ ಎಲ್ಲ ಹಣವನ್ನು ಕಾಯಿದೆಬದ್ಧವಾಗಿ ಪಡೆದರೆ ಅದರ ಬಹು ಭಾಗ ತೆರಿಗೆಗೇ ವ್ಯಯವಾಗುವದರಿಂದ ಅವರು ಕಪ್ಪು ಹಣದ ರೂಪದಲ್ಲಿ ಸಂಭಾವನೆಯನ್ನು ಪಡೆದು ಬಂಗಾರ, ವಜ್ರ ವೈಡೂರ್ಯ ಮುಂತಾದ ಅನುತ್ಪಾದಕ ವಸ್ತುಗಳ ಮೇಲೆ ಹಣ ವ್ಯಯಿಸುತ್ತಾರೆ. ಇಂತಹ ಮಹಾನ್ ತಾರೆಯರ ಮನೆಗಳ ಮೇಲೆ ತೆರಿಗೆ ದಾಳಿಯಾಗುವದು ಮತ್ತು ಕೋಟ್ಯಾಂತರ ರೂಪಾಯಿಗಳ ಆಸ್ತಿ ಪಾಸ್ತಿಗಳನ್ನು ವಶಪಡಿಸಿಕೊಳ್ಳುತ್ತಿರುವದು ದಿನನಿತ್ಯದ ಮಾತಾಗಿದೆ. ಇದೇ ಪರಿಸ್ಥಿತಿ ಕಟ್ಟಡ ನಿರ್ಮಾಣಗಳ ಸಂಸ್ಥೆಗಳಲ್ಲಿಯೂ ಉಂಟಾಗಿದೆ. ಕೈಗಾರಿಕೀಕರಣದ ಪರಿಣಾಮವಾಗಿ ಪಟ್ಟಣಗಳ ಬೆಳವಣಿಗೆ ತ್ವರಿತಗತಿಯಲ್ಲಿ ಆಗುತ್ತಿದೆಯಾದರೂ ಬೇಡಿಕೆಗೆ ತಕ್ಕಂತೆ ಮನೆಗಳ ನಿರ್ಮಾಣವಾಗುತ್ತಿಲ್ಲ. ಹಾಗಾಗಿ ಮನೆ ಖರೀದಿ ಅಥವಾ ಬಾಡಿಗೆಗೆ ಗ್ರಾಹಕರಲ್ಲಿ ಭಾರೀ ಸ್ಪರ್ಧೆ ಇರುವದರ ದುರ್ಲಾಭ ಪಡೆದು ಕಟ್ಟಡ ನಿರ್ಮಾಣ

ಸಂಸ್ಥೆಗಳು ಮತ್ತು ಮನೆ ಮಾಲೀಕರು ದೊಡ್ಡ ಪ್ರಮಾಣದಲ್ಲಿ
ರಸೀದಿ ಕೊಡದ ಹಣವನ್ನು ಸ್ವೀಕರಿಸುತ್ತಾರೆ. ದಿಲ್ಲಿ, ಮುಂಬ
ಯಿಯಂತ ನಗರಗಳಲ್ಲಿ ಇನ್ನೂ ಕೋಟ್ಯಂತರ ರೂಪಾಯಿ
ಗಳು ಈ ರೀತಿ ಹಸ್ತಾಂತರವಾಗುತ್ತವೆ.

ಸರಕಾರಿ ಅಥವಾ ಖಾಸಗಿ ವಲಯಗಳಲ್ಲಿ ಸೇವೆ ಸಲ್ಲಿಸುವ
ಉದ್ಯೋಗಿಗಳಿಗೆ ಸಂಬಳದ ಪಾವತಿ ಕಾಯಿದೆಯು ಕಕ್ಷೆಯೊಳಗೆ
ಆಗುವದರಿಂದ ಅವರಿಂದ ಆದಾಯದ ಮೂಲಗಳನ್ನು ಮರೆ
ಮಾಚಲು ಸಾಧ್ಯವಾಗುವದಿಲ್ಲ. ಆದರೆ ವೃತ್ತಿನಿರತ ವೈದ್ಯರ
ವಕೀಲರು ಎಂಜಿನೀಯರುಗಳು ಮುಂತಾದವರು ತಿಂಗಳಿಗೆ
ಲಕ್ಷಾಂತರ ರೂಪಾಯಿ ಸಂಪಾದಿಸಿದರೂ ಆದಾಯದ ಮೂಲ
ವನ್ನು ಸುಲಭದಲ್ಲಿ ಮರೆಮಾಚಿ ತೆರಿಗೆ ತಪ್ಪಿಸಿಕೊಳ್ಳುವಲ್ಲಿ
ಸಮರ್ಥರಾಗುತ್ತಾರೆ. ಇದಕ್ಕೆ ತೆರಿಗೆ ಇಲಾಖೆಯ ಸಿಬ್ಬಂದಿಯ
ಕೊರತೆ ಮತ್ತು ಕಾರ್ಯದಕ್ಷತೆಯಲ್ಲಿಯ ಕೊರತೆ ಕಾರಣವಾಗಿದೆ.

ಕಪ್ಪು ಹಣದ ನಿರ್ಮಾಣಕ್ಕೆ ಕಾರಣವಾದ ವಿಷಯಗಳನ್ನು
ಪಟ್ಟಿಮಾಡುತ್ತ ಹೋದಂತೆ ಅದು ಮುಗಿಯದ ಕಥೆಯಾಗು
ತ್ತದೆ. ಆದರೆ ಈ ಎಲ್ಲ ಕಾರಣಗಳಿಗೂ ಮೂಲವಾದದ್ದು
ಕುಸಿಯುತ್ತಿರುವ ಮಾನವಿಕ ಮೌಲ್ಯ ಎಂದು ಹೇಳಬಹುದು.
ಒಂದು ಕಾಲಕ್ಕೆ 'ಹಣ ನಷ್ಟವಾದರೆ ಏನೂ ನಷ್ಟವಾದಂತಲ್ಲ.
ಆರೋಗ್ಯ ನಷ್ಟವಾದರೆ ಏನೋ ಕಳೆದುಕೊಂಡಂತೆ. ಆದರೆ
ಚಾರಿತ್ರ್ಯ ನಷ್ಟವಾದರೆ ಎಲ್ಲವೂ ನಷ್ಟವಾದಂತೆ' ಎಂಬ ಉಕ್ತಿ

ಇತ್ತು. ಆದರೆ ಮನುಷ್ಯ ತನ್ನ ಚಾರಿತ್ರ್ಯವನ್ನು ಉಳಿಸಿ
ಕೊಳ್ಳುವ ಸಲುವಾಗಿ ತನ್ನ ಪ್ರಾಣವನ್ನು ಕಳೆದುಕೊಳ್ಳಲು
ಸಿದ್ಧನಿರುತ್ತಿದ್ದ. ಆದರೆ ಇಂದಿನ ದಿನಗಳಲ್ಲಿ ಇದೇ ಉಕ್ತಿಯನ್ನು
ತಿರುವು ಮುರುವಾಗಿ ಓದಬೇಕು. ಹಣಗಳಿಸಲಿಕ್ಕಾಗಿ ಮನುಷ್ಯ
ಚಾರಿತ್ರ್ಯವನ್ನೇ ಬೆಲೆತೆರಲು ಸಿದ್ಧವಾಗಿರುವನು ಮತ್ತು
ಸಮಾಜವೂ ಕೂಡ ಹಣವುಳ್ಳವನು ಯಾವ ರೀತಿಯಿಂದ
ಗಳಿಸಿದರೂ ಅವಕ್ಕೆ ಮನ್ನಣೆ ಕೊಡುತ್ತದೆ. ಬದಲಾಗುತ್ತಿರುವ
ಈ ಪದ್ಧತಿ ಸಮಾಜ ಎತ್ತ ಸಾಗುತ್ತಿದೆ ಎಂಬುವದರ ದ್ಯೋತಕವೂ
ಆಗಿದೆ.

ಕಪ್ಪು ಹಣದ ಬಳಕೆ ದೇಶವೆಂಬ ಮಹಾವೃಕ್ಷಕ್ಕೆ ಬಂದಳಿಕೆ
ಹಬ್ಬಿದಂತೆ. ಬಂದಳಿಕೆ ಮರದ ಸತ್ವವನ್ನೆಲ್ಲ ಹೀರಿ ಬೆಳೆಯುತ್ತ
ಮರವನ್ನು ದುರ್ಬಲಗೊಳಿಸುವಂತೆ ಕಪ್ಪು ಹಣ ದೇಶದ ಅರ್ಥ
ವ್ಯವಸ್ಥೆಯನ್ನು ಹಾಳುಗೆಡಹುತ್ತದೆ. ಚಲಾವಣೆಯಲ್ಲಿರುವ
ಹಣದ ಮೌಲ್ಯ ಕಡಿಮೆಯಾಗಿ ಬೆಲೆ ನಾಗಾಲೋಟದಲ್ಲಿ ಏರಲು
ಕಾರಣವಾಗುವದು. ಆಯಾತ–ನಿರ್ಯಾತಗಳ ಸಮತೋಲನ
ತಪ್ಪಿ ವಿದೇಶಿ ವಿನಿಮಯದಲ್ಲಿ ಏರು–ಪೇರಾಗಿ ಕೊನೆಗೆ ಹಣದ
ಅಪಮೌಲ್ಯಕ್ಕೆ ಕಾರಣವಾಗಬಹುದು. ಹೀಗೆ ದೇಶದ ನಾನಾ
ವ್ಯಾಧಿಗಳಿಗೆ ಕಾರಣವಾಗಬಹುದಾದ ಈ ಕಪ್ಪು ರಾಕ್ಷಸ
ಪಿಡುಗನ್ನು ಅದು ಉಲ್ಬಣಗೊಳ್ಳುವ ಮೊದಲೇ ಹತೋಟಿ
ಯಲ್ಲಿ ತರದಿದ್ದರೆ ದೇಶಕ್ಕೆ ಕೇಡು ತಪ್ಪದು.

## ೯. ನಿಯಂತ್ರಣ ಹೇಗೆ ?

ಕಪ್ಪು ಹಣದ ನಿಯಂತ್ರಣ ಯಾವೊಬ್ಬ ವ್ಯಕ್ತಿಯ ಅಥವಾ ಸರಕಾರದ ಹೊಣೆಯಾಗಿರದೇ ಅದು ನಾಗರಿಕರ, ಉದ್ಯಮಿಗಳ, ವ್ಯಾಪಾರಿಗಳ, ಕಳ್ಳ ಸಂತೆಕೋರರ ಮತ್ತು ರಾಜಕಾರಣಿಗಳೆಲ್ಲರ ಕರ್ತವ್ಯವಾಗಿದೆ. ಕಪ್ಪು ಹಣದ ನಿರ್ಮಾಣ ಮತ್ತು ನಿರ್ವಹಣೆಯ ಮೇಲೆ ಅಂಕುಶವಿಡುವ ಕ್ರಮಗಳ ಬಗ್ಗೆ ಅನೇಕ ಪಂಡಿತರು ಮತ್ತು ಸಮಿತಿಗಳು ತಮ್ಮ ಅಮೂಲ್ಯ ಸಲಹೆಗಳನ್ನಿತ್ತಿವೆ. ಅವುಗಳನ್ನೆಲ್ಲ ಸಂಕ್ಷಿಪ್ತಗೊಳಿಸಿ ಈ ಕೆಳಗಿನಂತೆ ವಿವರಿಸಬಹುದು.

ಮೊಟ್ಟ ಮೊದಲನೆಯದಾಗಿ ತೆರಿಗೆ ಕಾಯಿದೆಯನ್ನು ಸರಳಗೊಳಿಸಿ ತೆರಿಗೆ ಪ್ರಮಾಣವನ್ನು ಕಡಿಮೆಗೊಳಿಸಬಹುದು. ಹೀಗೆ ಮಾಡುವುದರಿಂದ ತೆರಿಗೆ ತಪ್ಪಿಸುವ ಪ್ರವೃತ್ತಿ ಕಡಿಮೆಯಾಗುವದು. ಇದರ ಜೊತೆ ಜೊತೆಗೆ ತೆರಿಗೆ ಸಂಗ್ರಹಣೆ ಕಾರ್ಯದಲ್ಲಿ ಸುಧಾರಣೆಯಾಗಬೇಕು. ಸದ್ಯ ಭಾರತದಲ್ಲಿ ತೆರಿಗೆ ಯೋಗ್ಯವಾದ ಅನೇಕ ಮೂಲಗಳು ಅಸಮರ್ಪಕ ಆಡಳಿತದಿಂದಾಗಿ ತೆರಿಗೆಯ ಬಲೆಯ ಹೊರಗೇ ಇವೆ. ತೆರಿಗೆಯ ಬಲೆ ತೆರಿಗೆ ಯೋಗ್ಯರಾದವರೆಲ್ಲರನ್ನು ಹಿಡಿಯುವಂತೆ ಬಿಗಿಯಾಗಬೇಕು.

ಎರಡನೆಯ ಮಹಾಯುದ್ಧದ ಕಾಲದಲ್ಲಿ ಯುರೋಪಿನ ದೇಶಗಳಲ್ಲಿ ನಿಯಂತ್ರಣ ಮತ್ತು ಲಾಯಸೆನ್ಸ್ (Licence) ಪದ್ಧತಿಯನ್ನು ಅಳವಡಿಸಲಾಯಿತು. ಯುದ್ಧ ನಿರ್ವಹಣೆಯ ಸಲುವಾಗಿ ಅದು ಅವಶ್ಯಕ ಆಗಿತ್ತು. ಆದರೆ ಯುದ್ಧ

ಮುಗಿದ ತಕ್ಷಣ ಅವನ್ನೆಲ್ಲ ತೆಗೆದು ಹಾಕಲಾಯಿತು. ನಿಯಂತ್ರಣ ಪದ್ಧತಿ ಅನಿಯಮಿತ ಕಾಲದ ವರೆಗೆ ಇದ್ದರೆ ಅದು ಅವ್ಯವಹಾರಕ್ಕೆ ಕಾರಣವಾಗುತ್ತದೆ. ಆದರೆ ದುರ್ದೈವದಿಂದ ದೇಶದ ಆರ್ಥಿಕ ಅಭಿವೃದ್ಧಿಗಾಗಿ ವಿಧಿಸಿದ ನಿಯಂತ್ರಣ ಪದ್ಧತಿ ಭಾರತದಲ್ಲಿ ಅನೂಚಾನವಾಗಿ ನಡೆದುಕೊಂಡು ಬಂದಿದೆ. ಇದು ದಿಲ್ಲಿಯ ದೊರೆಗಳು ಮತ್ತು ರಾಜ್ಯವನ್ನು ಆಳುವ ಸಾಮಂತರಿಗೆ ಕರೆಯುವ ಹಸುವಾಗಿ ಪರಿಣಮಿಸಿದೆ. ದೇಶದ ಪಿತಾಮಹ ಮಹಾತ್ಮಾಜಿಯವರು ೧೯೪೭ರ ನವ್ಹಂಬರ ೩ನೇ ತಾರೀಖಿಗೆ ನಡೆದ ಪ್ರಾರ್ಥನಾ ಸಭೆಯಲ್ಲಿ ನಿಯಂತ್ರಣವು ಮೋಸ ಮತ್ತು ಕೃತ್ರಿಮ ಕೊರತೆಗೆ ಕಾರಣವಾಗಿ ಕಪ್ಪು ಹಣದ ನಿರ್ಮಾಣಕ್ಕೆ ಪ್ರೇರೇಪಿಸುವದೆಂದು' ಹೇಳಿದ್ದರು. ಇಂದು ನಲ್ವತ್ತು ವರ್ಷಗಳ ನಂತರ ವಿಚಾರಿಸಿದಾಗ ಮಹಾತ್ಮ ತನ್ನ ಜನರನ್ನು ಎಷ್ಟು ಚೆನ್ನಾಗಿ ಅರಿತಿದ್ದನೆಂಬುದರ ಅರಿವಾಗುತ್ತದೆ. ಭಾರತದಲ್ಲಿ ಲಾಯಸೆನ್ಸ್ ಮತ್ತು ನಿಯಂತ್ರಣ ಪದ್ಧತಿ ಕಡಿಮೆಯಾಗುವದರ ಬದಲು ಪ್ರತಿವರ್ಷವೂ ಹೆಚ್ಚುತ್ತಲೇ ಹೋಗುತ್ತಿದೆ. ಇದು ಆಡಳಿತದಲ್ಲಿರುವ ಸರಕಾರ ಮತ್ತು ಅಧಿಕಾರಿಗಳ ಕೈಯಲ್ಲಿ ಬಂಗಾರದ ತತ್ತಿ ಇಡುವ ಕೋಳಿಯಾಗಿದೆ. ಅವನ್ನು ಎಷ್ಟು ಬೇಗ ನಿವಾರಿಸಿವರೆ ದೇಶದ ಸ್ವಾಸ್ಥ್ಯಕ್ಕೆ ಅಷ್ಟೇ ಒಳ್ಳೆಯದು.

ರಾಜಕೀಯ ಕಾರಣಗಳಿಗಾಗಿ ದೇಶದ ಆದಾಯದಲ್ಲಿ ದೊಡ್ಡ ಪಾಲನ್ನು ಸಂರಕ್ಷಣೆಯ ಸಲುವಾಗಿ ಈಗ ವಿನಿಯೋಗವಾದ ಲಾಗುತ್ತದೆ, ಆದರೆ ಗೌಪ್ಯತೆಯ ಕಾರಣಗಳಿಗಾಗಿ ಸಂರಕ್ಷಣಾ ಖಾತೆಯಲ್ಲಿ ಆಗುವ ವೆಚ್ಚದ ವಿವರವನ್ನು ಜನತೆಗೆ ತಿಳಿಸಲಾಗು

ತ್ತಿಲ್ಲ. ಅವರ ಗೌಪ್ಯತೆಯನ್ನು ಭಾರತದ ಪವಿತ್ರ ಗೋವಿನಂತೆ ಕಾಪಾಡಲಾಗುತ್ತಿದೆ ಮತ್ತು ಅಲ್ಲಿ ಅನೇಕ ಅವ್ಯವಹಾರಗಳಿವೆ ಎಂಬುದು ಹಲವು ತಜ್ಞರ ಅಭಿಮತ. ಸಂರಕ್ಷಣಾ ವೆಚ್ಚದ ವಿವರ ವನ್ನು ಗೌಪ್ಯತೆಗೆ ಭಂಗಬಾರದಂತೆ ಜನತೆಯ ಮುಂದಿಡುವುದ ರೊಂದಿಗೆ ಅಲ್ಲಿ ಆಗುವ ಅಪವ್ಯಯವನ್ನು ತಡೆಯಬಹುದು. ಚೆಲ್ಲಯ್ಯ ಸಮಿತಿಯ ವರದಿಯಲ್ಲಿಯೂ ಕೂಡ ಈ ವಿಷಯ ವಾಗಿ ವಿವರವಾಗಿ ಚರ್ಚಿಸಲಾಗಿದೆ.

ಭಾರತದಲ್ಲಿ ಆದಾಯಕರ ಕೊಡುವವರ ಸಂಖ್ಯೆ ಶೇಕಡಾ ಒಂದಕ್ಕಿಂತ ಕಡಿಮೆ ಮತ್ತು ಆದಾಯ ತೆರಿಗೆಯಿಂದ ಸಂಗ್ರಹಿಸ ಲಾಗುವ ಹಣ ಒಟ್ಟು ಸಂಗ್ರಹಣೆಯ ಶೇಕಡಾ ೫ಕ್ಕಿಂತ ಕಡಿಮೆ. ಆದಾಯ ತೆರಿಗೆ ಸಂಗ್ರಹಣೆ ಮತ್ತು ನಿರ್ವಹಣೆಗೆ ತೆರಿಗೆ ಇಲಾಖೆಯ ಸಮಯ ಸಾಕಷ್ಟು ವ್ಯಯವಾಗುವದರಿಂದ ಆದಾಯ ತೆರಿಗೆ ಯನ್ನು ತೆಗೆದುಹಾಕಬೇಕೆಂದು ವಾಡಿಲಾಲ ಡಗ್ಲಿ ಪ್ರತಿಪಾದಿಸಿ ದ್ದಾರೆ. ಅದಕ್ಕೆ ಪ್ರತಿಯಾಗಿ ವೆಚ್ಚದ ಮೇಲೆ ತೆರಿಗೆ ಹೇರಿದರೆ ಆದಾಯ ತೆರಿಗೆಯ ಬಲೆಯಿಂದ ತಪ್ಪಿಸಿಕೊಳ್ಳುವ ತಿಮಿಂಗಿಲ ಗಳು ಕೂಡ ವೆಚ್ಚದ ತೆರಿಗೆ ಬಲೆಯಲ್ಲಿ ಸಿಕ್ಕಿ ಬೀಳುತ್ತವೆಯಲ್ಲದೆ ವೆಚ್ಚದ ತೆರಿಗೆ ನಿರ್ವಹಣೆಯೂ ಕೂಡ ಸರಳವಾಗುತ್ತದೆ.

ಇದರ ಜೊತೆಗೆ ಕಪ್ಪು ಹಣ ಹೊರತೆಗೆಯುವ ಅನೇಕ ಯೋಜನೆಗಳನ್ನು ಸರಕಾರ ಕೈಕೊಳ್ಳಬಹುದು. ಕಪ್ಪು ಹಣ ಘೋಷಿಸುವವರಿಗೆ ರಿಯಾಯಿತಿ. ಶಿಕ್ಷೆಯಿಂದ ಮನ್ನಾ ಮಾಡು ವದು. ಕಪ್ಪು ಹಣವನ್ನು ದೇಶದ ಅಭಿವೃದ್ಧಿಯಲ್ಲಿ ತೊಡಗಿಸು ವಂತೆ ಮಾಡುವದು ಮುಂತಾದ ಕ್ರಮಗಳನ್ನು ತೆಗೆದುಕೊಳ್ಳ

ಬಹುದು. ಸರಕಾರವು ಕಾಲಕಾಲಕ್ಕೆ ಇಂಥ ಯೋಜನೆಗಳನ್ನು ಅಳವಡಿಸಿ ಕಪ್ಪು ಹಣ ಸಂಗ್ರಹವನ್ನು ಹೊರತೆಗೆಯಲು ಪ್ರಯತ್ನಿಸಿಯಾದರೂ ಅದಕ್ಕೆ ಸಿಕ್ಕ ಪ್ರತಿಫಲ ಮಾತ್ರ ಗುಡ್ಡವನ್ನು ಅಗೆದು ಇಲಿಯನ್ನು ಹಿಡಿದಂತಾಗಿದೆ. ಆದರೆ ೧೯೮೫ರಲ್ಲಿ ಆಯವ್ಯಯದಲ್ಲಿ ಅಳವಡಿಸಿದ ತೆರಿಗೆ ಸರಳೀಕರಣ ಮತ್ತು ತೆರಿಗೆ ಪ್ರಮಾಣದ ಕಡಿತದಿಂದಾಗಿ ಅಪೂರ್ವ ಯಶಸ್ಸು ದೊರಕಿದೆ ಎಂದು ಹೇಳಬಹುದು. ಆ ಕಾರಣವಾಗಿ ೧೯೮೫–೮೬ರಲ್ಲಿ ೫೮೦೦ ಕೋಟಿ ರೂಪಾಯಿಗಳಷ್ಟು ಹೆಚ್ಚು ತೆರಿಗೆ ಸಂಗ್ರಹವಾಗಿದೆ ಎಂದು ಅಧಿಕೃತ ಅಂದಾಜು. ಸರಕಾರದ ಕಾರ್ಯಸಾಧು ನೀತಿಯ ಜೊತೆಗೆ ಕಳ್ಳ ವ್ಯಾಪಾರವನ್ನು ಯಶಸ್ವಿಯಾಗಿ ತಡೆಗಟ್ಟಲು ಯೋಗ್ಯ ಸಿಬ್ಬಂದಿ ವ್ಯವಸ್ಥೆ ಮತ್ತು ಅದಕ್ಕೆ ಬೇಕಾದ ಅಧಿಕಾರವನ್ನು ಅವರಿಗೆ ಒದಗಿಸಿ ಕೊಡುವದರ ಮೂಲಕ ಕಳ್ಳ ವ್ಯಾಪಾರವನ್ನು ಯಶಸ್ವಿಯಾಗಿ ತಡೆಯಬಹುದು.

ಎಲ್ಲಕ್ಕಿಂತ ಮುಖ್ಯವಾಗಿ ಉದ್ಯಮವನ್ನು ರಾಜಕೀಯದಿಂದ ಮುಕ್ತಗೊಳಿಸಬೇಕು. ಜೊತೆಗೆ ಚುನಾವಣೆಗೆ ಸರಕಾರವೇ ಹಣ ವೆಚ್ಚ ಮಾಡುವ ಪದ್ಧತಿ ಅನುಷ್ಠಾನಕ್ಕೆ ಬಂದರೆ ದೊಡ್ಡ ಪ್ರಮಾಣದಲ್ಲಿ ಕಪ್ಪು ಹಣದ ಹುಟ್ಟನ್ನು ಅಡಗಿಸಿದಂತಾಗುವದು.

ಕೊನೆಯದಾಗಿ ಹೇಳುವದಾದರೆ ದೇಶವನ್ನು ದಿವಾಳಿಯಾಗುತ್ತಿರುವ ನೈತಿಕ ಮೌಲ್ಯದಿಂದ ರಕ್ಷಿಸಬೇಕು. ಮಾನವೀಯ ಮೌಲ್ಯಗಳನ್ನು ಉದ್ದೀಪನಗೊಳಿಸುವ ಅಂಶಗಳನ್ನು ಶಿಕ್ಷಣದಲ್ಲಿ ಅಳವಡಿಸುವದರಿಂದ ಮುಂದಿನ ಪೀಳಿಗೆಯನ್ನಾದರೂ ಈ ಅನಾಹುತದಿಂದ ಉಳಿಸುವಂತಾಗಬೇಕು. ಇದು ಇತರ ಅನೇಕ ಯೋಜನೆಗಳಂತೆ ಪ್ರಚಾರ ಸಾಧನವಾಗದೇ ಪ್ರತ್ಯಕ್ಷ ಪ್ರಯೋಗ

ದಲ್ಲಿ ಬರಬೇಕು. ಒಂದೇ ಮಾತಿನಲ್ಲಿ ಹೇಳುವದಾದರೆ ಹಿಂದಿನ ಗುರುಕುಲಗಳಲ್ಲಿ ಸ್ನಾತಕರ ದೀಕ್ಷಾಂತ ಸಮಾರಂಭದಲ್ಲಿ ಭೋದಿಸುತ್ತಿದ್ದ 'ಸತ್ಯಂ ವದ. ಧರ್ಮಂ ಚರ' ಎಂಬ ವೇದದ ಉಕ್ತಿ ಇಂದು ನಮ್ಮೆಲ್ಲರ ಉಸಿರಾದರೆ ಕಪ್ಪು ಹಣದ ಹುಟ್ಟಡಗಿಸುವದು ಎಷ್ಟರ ಕೆಲಸ ?

---

## ಉಪನ್ಯಾಸ ಗ್ರಂಥಮಾಲೆಯ
## ಇತರ ಕೆಲವು ಪ್ರಕಟನೆಗಳು

೧ ಭಾರತದ ವಾಣಿಜ್ಯಾಭಿವೃದ್ಧಿ
— ಸಿ. ಎಂ. ಕೊಟ್ಟೂರಶೆಟ್ಟಿ

೨ ನಮ್ಮ ದೇಶದಲ್ಲಿ ಬಡತನ ಹಾಗೂ ನಿವಾರಣೆ
— ಎಂ. ಸಿ. ಕೊಡ್ಲಿ

೩ ಗ್ರಾಮಾಂತರ ಪ್ರದೇಶದ ಮಾರುಕಟ್ಟೆಯ ಮಹತ್ವ
— ಎ. ಆರ್. ರೊಟ್ಟಿ

೪ ಭಾರತದಲ್ಲಿ ಸುಶಿಕ್ಷಿತ ನಿರುದ್ಯೋಗ ಸಮಸ್ಯೆ
— ಟಿ. ಸೋಮಸೇಖರ

೫ ಕಾರ್ಮಿಕರ ಸಮಸ್ಯೆಗಳು
— ಎಸ್. ಜಿ. ಕರಭಂಟನಾಳ

೬ ಕುಂಟುತ್ತಿರುವ ಕೈಮಗ್ಗದ ಉದ್ದಿಮೆ
— ಈರಣ್ಣ ಹಟ್ಟಿ

೭ ಗ್ರಾಮಾಂತರ ಪ್ರದೇಶಗಳಲ್ಲಿ ರಾಷ್ಟ್ರೀಕೃತ ಬ್ಯಾಂಕುಗಳಪಾತ್ರ
— ಎ. ಎಮ್. ಯರನಾಳ

೮ ಪ್ಲೇಟೋನ ಆದರ್ಶ ರಾಜ್ಯದ ರಾಜಕೀಯ ಸಿದ್ಧಾಂತಗಳು
— ಕೆ. ಎಂ. ಮೆಹರವಾಡೆ

೯ ಗ್ರಾಮೋದ್ಯೋಗಗಳ ಮಹತ್ವ
— ಪಿ. ಎ. ಭಟ್ಟ

೧೦ ಅಪರಾಧಿಗಳು ಹಾಗೂ ಅವರ ಸುಧಾರಣೆ
— ಎಸ್. ಎಫ್. ಪೂಜಾರ

**ಪ್ರಸಾರಾಂಗ**
**ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ**